# FOOD COMMITTEE

*CHAIRMAN*

**Dr. B.T. MANJUNATHAN**
Deputy Director, Food & Civil Supplies
and Consumer Affairs, Davangere.

*CO - CHAIRMAN*

**Dr. SHIVAMURTHEPPA**
Joint Director of Agriculture, Davangere.

*MEMBERS*

**DR. HALAGAPPA**
Deputy Director, Animal Husbandry and
Veterinary Services, Davangere

**SRI JPARASHIVAMURTHY**
D.D. Horticulture, Davangere.

**SRI SURESH KULKARNI**
General Manager, KMF

**SRI K. RAMAPPA**
Assistant Director, Food and Civil Supplies,
I.R.A., Davangere.

**SMT. N.SHANTIMATI**
Joing State Secretary,
B.S.& G. Bangalore

**SRI K.R. VEERANNA**
Vice President South Local Association
B.S.& G

**SMT. PUTTAMMA MAHARUDRAIAH**
Dist. Head Quarters Commissioner (Guides)
B.S.& G

**SRI KOGUNDI BAKKAPPA**
Secretary, Rice Mill Owners Association,
Davangere.

# WATER SUPPLY COMMITTEE

*CHAIRMAN*

**H.N. NIRANJAN**
Executive Engineer, Z.P.Engineering
Division, Davangere.

*MEMBERS*

**SRI RAJAPPA**
Project Director,Nirmithi Kendra, DVG

**SRI KALLINGAPPA**
Asst.Executive Engineer, ZP Engineering
Sub-Division, Davangere.

**SRI K.S. RANGANATH**
Assistant Executive Engineer,
KUWS, Davangere.

**SRI BOOSNUR. V. VISHWANATH**
Assistant District Commissioner
(Scouts) B.S. & G.Davangere.
Vice President, Shree Murugharajendra Co-op. Bank Ltd.,

**SILVER JUBILLE**
**SCOUTS AND GUIDES STATE JAMBORATE DAVANGERE**

# EXHIBITION COMMITTEE

*CHAIRMAN*

**SRI BASAVARAJ**
Deputy Secretary,
Zilla Panchayat, Davangere.

*CO - CHAIRMAN*

**Dr. SHIVAMURTHEPPA**
Joint Director, Agriculture,
Davangere

**Dr. SURANAGI**
Joint Director, Industries and Commerce,
Davangere.

*MEMBERS*

**SRI B.K. NINGAPPA**
Executive Engineer, PWD,
Davangere

**SRI LINGARAJU**
Executive Engineer,
Pollution Control Board, Davangere

**SRI N.V. CHIKKANAGOWDAR**
Secretary, APMC, Davangere

**SMT. JANAKI VENUGOPAL**
S.O.G. (Guides) B.S.& G

**SRI RAJAPPA**
Project Director, Nirmiti Kendra,
Davangere.

**SRI KEMPARAJE GOWDAR**
DDPI, Davangere, Vice President B.S & G

**PROF. K.G.GURUMURTHY**
Rtd. Professor of Anthropology, Davangere

**SMT. SHANTHA YAVAGAL**
District Commissioner (Guides) B.S. & G

# SANITATION COMMITTEE

*CHAIRMAN*

**SRI NARAYANAPPA**
Commissioner, CMC, Davangere

*CO - CHAIRMAN*

**SRI SHAIK IBRAHIM**
project Director,
Urban Development Cell, Davangere.

*MEMBERS*

**SRI KARIHANAMEGOWDA**
DD, KLAC, Davangere.

**SRI PATTHAR**
A.E.E. City Municipal,
Davangere.

**SRI MADHAV SINGH**
State Training Commissioner,
(Scouts) B.S.& G

**SRI A. SHIVAPPA**
Head Master, GHPS, Vinobanagara.
Davangere.

## HEALTH AND MEDICAL SERVICE COMMITTEE

*CHAIRMAN :* **DR. B.K.JAYADEVAPPA**
District Health and Family Welfare Officer,
Davangere.

*CO-CHAIRMAN :* **DR. VEERABHADRAPPA**
District Surgeon, Davangere.

*MEMBERS :* **DR. KULKARNI**
Pediatrician, Davangere
**DR. K.H.PANCHAKSHARAPPA**
Ret. Medical Officer, Davangere.
**DR. NAGARAJA RAO**
**DR. NAGA PRAKASH**
**DR. KADLI**
**DR. ALUR MANJUNATH**
**DR. UMANATH ULLAL**
**DR. MURUGESH**
**DR. K.B.GURUMURTHY**
**DR. E.R.SIDDESHI**
**SRI. MADHAVASINGH**
S.T.C. (Scouts) B.S.& G.

## AWARDS, BADGES AND MOMENTOR COMMITTEE

*CHAIRMAN :* **SRI JAMBIGI SHARANAPPA**
District Chief Commissioner, B.S & G Davangere.

*CO-CHAIRMAN :* **SRI ATHANI KOTRESH**
President Bharath Scouts & Guides, Davangere.

*CONVENOR :* **SMT. C.MANJULA**
Assistant State Organising Commissioner, B S & G
Davangere.

*MEMBERS :* **SRI N.REVANASIDDAPPA**
Artist, Davangere.
**SRE M.SHIVAKUMAR**
Eshwari Creations, Davangere.
**SMT. K.K.LEELA**
S.T.C.(Guides) B.S.& G. Davangere.
**SRI N.T.RAJENDRA**
Animac Desigh & Studio Davangere.

**SILVER JUBILLE**
**SCOUTS AND GUIDES STATE JAMBORATE DAVANGERE**

# ACCOMODATION COMMITTEE

*CHAIRMAN :* **SRI B.NANJUNDESHWAR**, K.A.S.,
Head quarters Assistant to
Deputy Commissioner, Davangere.

*CO-CHAIRMAN :* **SRI B.K.NINGAPPA**
Executive Engineer, PWD, Davangere

*CONVENER :* **SRI NARAYANAPPA**
Commissioner, CMC, Davangere.

*MEMBERS*

**SRI TATASHIVAN**
District Officer, Backward Classes
and Minorities, Davangere.

**SRI MATTIHALLI**
District Social Welfare Officer,
Davangere.

**Prop :**
Hotel Sai International

**SRI KESWAMURTHY**
Prop : Hotel Shanti Park

**SRI N.NARAYAN SHETTY**
State Organising Commissioner, B.S.& G

**SRI RUDRAPPA**
Executive Officer, Taluka Panchayat, Davangere.

**SRI B.BASAPPA**
Prop : Hotel Pooja International

**SRI H.SHIVAPPA,**
Prop : Hotel Chetana

**SRI P.B. PRAKASH**
Mahavir Bhavan

**SRI ABDUL JABBAR**
Star Shamiyan, K.T.J. Nagar, Davangere

**SRI VINAY. T.H.M.**
B.E., Civil.

# TRANSPORT AND SIGHT SEEING COMMITTEE

*CHAIRMAN :* **SRI THEMBAD**
Regional Transport Officer, Davangere.

*CO-CHAIRMAN :* **SRI R.C.MALLIKARJUNAIAH**
Divisional Controller, KSRTC

*MEMBERS*

**SRI GURU BASAVARAJ**
Deputy Conservator of Forests
(Territorial), Davangere.

**SRI HUSSAIN**
Assistant Director, Tourism, Davangere.

**SRI MANOHAR SA LADWA**
President, Bus Owners Association, Davangere.

**SRI SIDDESWARAMURTHY**
President, Lorry Owners Association, Davangere.

**SRI NAYAN PATIL**
Assistant Dist. Commissioner (Scouts) B.S.& G.

**SILVER JUBILLE**
**SCOUTS AND GUIDES STATE JAMBORATE DAVANGERE**

# PUBLICITY AND PUBLIC RELATIONS COMMITTEE

*CHAIRMAN :* **SRI SHADAKSHARAPPA**
Edior, Janata Vani, Davangere.

*CO-CHAIRMAN :* **SRI KANUMAPPA**
District Information and Publicity Officer, Davangere.

**SMT. SAHANA**
Assistant District Information and Publicity Officer, Davangere.

*MEMBER :* **SRI B.N. MALLESH**
Assistant District Information and Publicity Officer, Davangere.

**PRESIDENT,** Union of Working Journalist, Davangere.

District Correspondent, **The Hindu,** Daily

District Correspondent, **The Times of India**, Daily

District Correspondent, **Prajavani,** Kannada Daily

District Correspondent, **Samyukta Karnataka,** Kannada Daily

District Correspondent, **Indian Express,** Daily

District Correspondent, **Vijaya Karnataka,** Kannada Daily

District Correspondent, **Udaya Vani,** Kannada Daily

Reporter, **Udaya News**

Reporter, **ETV News**

**SMT. JANAKI VENUGOPAL,**
State Organising Commissioner, B.S.&G.

**SRI SHANKARNAIK**
Dist. Training Commissioner, B.S.&G.

# ELECTRICITY COMMITTEE

*CHAIRMAN :* **SRI DESHPANDE**
Superintending Engineer, BESCOM

*CO-CHAIRMAN :* **SRI NATARAJ**
Executive Engineer, KPTCL, Davangere

**SRI KOTAPPA**
Executive Engineer, BESCOM, Davangere

*CONVENER :* **SRI A.P. SHADAKSHARAPPA**
District Treasurer B.S.&G.

*MEMBER :* **SRI N.NARAYAN SHETTY**
S.O.C. (Scouts) B.S.&G.

**SRI. M.P. CHANDRAPPA**
Vice President, South Local
Association, Davangere. B.S.&G,

**SILVER JUBILLE**
**SCOUTS AND GUIDES STATE JAMBORATE DAVANGERE**

# GATE, STAGE AND CULTURAL COMMITTEE

*CHAIRMAN :* **SRI B.K.NINGAPPA**
Executive Engineer, PWD, Davangere.

*CO-CHAIRMAN :* **SMT. NEELAMMA**
Assistant Director, Kannada and Culutre, Davangere.

*MEMBERS :* **SRI HEGGERI RANGAPPA**
Akshara Vani, Cultural Troop,Davangere.

**SRI NAYAN PATIL**
Assistant Commissioner (Scouts) Davangere.

**SRI N.REVANASIDDAPPA,**
Artist, Davangere.

**SRI N.NARAYANA SHETTY**
State Organising Commissioner (Scouts) Davangere.

**SRI SHIVANALLI RAMESH**
President, CMC,Davangere.

**SRI JANAKI VENUGOPAL**
State Organising Commissioner (Guides)

**SRI MADHAV SINGH**
State Training Commissioner (Scouts)

**SMT. K.LEELA**
State Training Commissioner (Guides)

**SMT. R. SUKHVANI**
Asst. Secretary, B.S. & G., Davangere.



## This is what they Said . . . . .



*I pray that every home in India may have children like Scouts & Guides.*

*- Mahatma Gandhi*



*I think the Scouts/Guides are excellent material and the more they expand, the better for the Country.*

*- Jawaharlal Nehru*



*Wake up! Get Busy! You have only one life-day to Live, So make the best of every minute of it.*

*- Baden Powell*



*If I had a dozen Sons and Daughters I would send everyone of them to Scouting & Guiding.*

*- Dr. Annie Besant*



*The Greatest Contribution to Education in the 20th Century was made not by an Educationist but by a Soldier who founded the Scout Movement.*

*- George Bernard Shaw*

Sources : State Information & Documentation Centre





## ಭಾರತದ ಘನವೆತ್ತ ರಾಷ್ಟ್ರಪತಿಗಳಾದ
## ಡಾ|| ಎ.ಪಿ.ಜೆ.ಅಬ್ದುಲ್ ಕಲಾಂರವರು
# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ನೀಡಿದ ಧ್ಯೇಯ ಸಂದೇಶ

ಈ ರಾಷ್ಟ್ರೀಯ ಮೇಳದಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸದಸ್ಯರ ಜೊತೆ ಇರಲು ಎಂದಿಗೂ ನಾನು ಹರ್ಷಿಸುತ್ತೇನೆ. ವೃತ್ತಿ ನಿರತರು, ಸ್ವಯಂ ಸೇವಕರು, ರೋವರ್ಸ್-ರೇಂಜರ್ಸ್, ಸ್ಕೌಟ್ಸ್ - ಗೈಡ್ಸ್, ಕಬ್ಸ್, ಬುಲ್ ಬುಲ್ಸ್ ಮತ್ತು ಮುಖ್ಯ ಅತಿಥಿಗಳಿಗೆ ಈ ಸಂದರ್ಭದಲ್ಲಿ ನಾನು ಶುಭಕೋರುತ್ತೇನೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಸಂಖ್ಯಾ ಬಲ 38 ಲಕ್ಷಕ್ಕೂ ಮೀರಿ ಬೆಳೆದಿದೆ. ಇದರ ದಳಗಳು ಹಿಮಾಲಯದ ಲೇಹಾದಿಂದ ತಮಿಳುನಾಡಿನ ಕನ್ಯಾಕುಮಾರಿಯವರೆಗೂ, ಪಶ್ಚಿಮದ ಕಚ್‌ನಿಂದ ಪೂರ್ವದ ಕೊಹಿಮಾವರೆಗೂ ಮತ್ತು ನಮ್ಮ ದ್ವೀಪಗಳಲ್ಲೂ ವ್ಯಾಪಿಸಿವೆ. ರೈಲ್ವೇ ಅಪಘಾತ ಸಂಭವಿಸಿದಲ್ಲಿ ಸ್ಥಳಕ್ಕೆ ಮೊದಲು ಧಾವಿಸಿ ಬಂದು ನೆರವು ನೀಡುವವರು ಸ್ಕೌಟ್‌ಗಳು. ಎಂತಹಾ ಧ್ಯೇಯೋದ್ದೇಶ! ನಾನೀಗ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ''ಧ್ಯೇಯೋದ್ದೇಶ''ಗಳನ್ನು ಕುರಿತು ಮಾತನಾಡಲು ಇಚ್ಛಿಸುತ್ತೇನೆ.

ನಿಮಗೆಲ್ಲಾ ತಿಳಿದಿರುವಂತೆ ನಮ್ಮ ರಾಷ್ಟ್ರವನ್ನು 2020ಕ್ಕೆ ''ಅಭಿವೃದ್ಧಿಶೀಲ ರಾಷ್ಟ್ರವನ್ನಾಗಿ''(Developed Country) ಮಾರ್ಪಡಿಸಬೇಕೆಂಬ ಸ್ಥಿರ ಕಾರ್ಯದಲ್ಲಿ ತೊಡಗಿದೆ. ನಮ್ಮ ರಾಷ್ಟ್ರದಲ್ಲಿ 25 ವರ್ಷದ ಒಳಗಿರುವ 549 ಮಿಲಿಯ ಯುವಕ, ಯುವತಿಯರೆ ಈ ಸಾಧನೆಯ ಮುಖ್ಯ ಸಂಪನ್ಮೂಲವಾಗಿದ್ದಾರೆ. ಭಾರತಕ್ಕೆ ಜ್ಞಾನವಂತರೂ ಶ್ರಮಿಕರೂ, ರಾಷ್ಟ್ರಪ್ರೇಮವುಳ್ಳವರು ಮತ್ತು ಶಿಸ್ತಿನಿಂದ ಕೂಡಿದವರೂ, ಮೌಲ್ಯಯುತರೂ ಆದ ಯುವ ಜನಾಂಗದ ಅವಶ್ಯಕತೆ ಇದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಧ್ಯೇಯ ಸಂದೇಶವು ರಾಷ್ಟ್ರದ ಧ್ಯೇಯಸಂದೇಶಕ್ಕೆ ಅಗತ್ಯವಾದ ಜ್ಞಾನಶೀಲ ಯುವಕರನ್ನು ಅಭಿವೃದ್ಧಿಗೊಳಿಸಲು ತಕ್ಕುದಾಗಿದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಿಂದ ತರಬೇತಿ ಹೊಂದುತ್ತಿರುವ ಶಿಸ್ತಿನಿಂದ ಕೂಡಿದ ಯುವ ಶಕ್ತಿಯನ್ನು ಪರಿಗಣಿಸುತ್ತಾ ನಾನು ರಾಷ್ಟ್ರದ ಧ್ಯೇಯ ಸಂದೇಶಕ್ಕಾಗಿ ಜ್ಞಾನವಂತ ಯುವಕರ ಅಭಿವೃದ್ಧಿಯಲ್ಲಿ ಈ ಸಂಸ್ಥೆಯು ವಹಿಸಬಹುದಾದ ಪಾತ್ರ ಕುರಿತು ನನ್ನ ವಿಚಾರವನ್ನು ತಮ್ಮೊಡನೆ ಹಂಚಿಕೊಳ್ಳಲು ಇಚ್ಛಿಸುತ್ತೇನೆ.

### *ನಾ ಕಂಡಂತೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್*

ಇಂದು 3 ಲಕ್ಷ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಯುವ ಸೈನ್ಯ ಶಾಲೆ ಅಥವಾ ಕಾಲೇಜುಗಳಲ್ಲಿ ತರಬೇತಿ ಪಡೆಯುತ್ತಿದ್ದಾರೆ. ರಾಷ್ಟ್ರದ ವಿದ್ಯಾರ್ಥಿಗಳ ಸಂಖ್ಯಾ ಬಲಕ್ಕೆ ಹೋಲಿಸಿದಾಗ ಇದರ ಪ್ರತಿಶತ ಪ್ರಮಾಣ ಅತ್ಯಲ್ಪ. ಒಂದು ಬಿಲಿಯನ್ ಜನಸಂಖ್ಯೆ ಹೊಂದಿರುವ ಈ ಚಲನ ಶೀಲ ರಾಷ್ಟ್ರವು ದಿನೇ ದಿನೇ ತೊಡಕಾಗುತ್ತಿದೆ. ಪ್ರತಿವರ್ಷವೂ ಉದ್ಯೋಗಾವಕಾಶದ ನಿರೀಕ್ಷೆಯಲ್ಲಿ 10 ಮಿಲಿಯನ್ ಯುವಕಯುವತಿಯರು ಶಿಕ್ಷಣ ಪಡೆದು ಸಮಾಜದಲ್ಲಿ ಸೇರ್ಪಡೆಯಾಗುತ್ತಿದ್ದಾರೆ. ಅವರಿಗೆ ಉತ್ಪಾದಕ ಉದ್ಯೋಗದ ಅವಶ್ಯಕತೆ ಇದೆ. ಇದನ್ನು ನೀಡದಿದ್ದರೆ ಸಮಾಜದಲ್ಲಿ ಅಭದ್ರತೆ ಬೆಳೆಯುತ್ತದೆ.

ಸ್ವಾತಂತ್ರ್ಯ ಚಳವಳಿಯು ಗುಣಾತ್ಮಕ ನಾಯಕತ್ವವನ್ನು ಬೆಳೆಸಿ ''ಯಾವುದೇ ವ್ಯಕ್ತಿ ಅಥವಾ ಸಂಸ್ಥೆ ಅಥವಾ ಪದ್ಧತಿಗಳಿಗಿಂತಲೂ ದೇಶ ದೊಡ್ಡದು'' ಎಂಬ ಪರಿಕಲ್ಪನೆಯನ್ನು ಘೋಷಿಸಿದ್ದರೂ ಇತ್ತೀಚಿನ ಕೆಲವು ದಶಕಗಳಿಂದ ಈ ರಾಷ್ಟ್ರ ಸ್ಫೂರ್ತಿ ಜನಮನದ ಆಳದಲ್ಲಿ ಇಳಿದು, ಇಳಿತವನ್ನು ಅನುಭವಿಸುತ್ತಿದೆ.

ರಾಜಕೀಯ ಪಕ್ಷಗಳು ಒಂದು ಮತ್ತೊಂದರೊಡನೆ ಸ್ಪರ್ಧಿಸುತ್ತಾ ''ಪ್ರಜೆಗಳಿಗೆ ಉತ್ತಮ ಜೀವನಮಟ್ಟ ಒದಗಿಸಲು ಗುಣಾತ್ಮಕವಾಗಿ ಮತ್ತು ವೃತ್ತಿ ಶೀಲರಾಗಿ ಶೀಘ್ರವಾಗಿ ಅಭಿವೃದ್ಧಿಗೊಳಿಸಲು ಹೇಗೆ ಸಾಧ್ಯ?'' ಎಂಬ ಪ್ರಶ್ನೆಗೆ ಉತ್ತರ ಕೊಡಬೇಕು. ಈ ಪ್ರವೃತ್ತಿಯನ್ನು ಬೆಳೆಸಲು ಯುವಕರು ಅದರಲ್ಲೂ ಶಿಸ್ತಿನಿಂದ ಕೂಡಿದ ಯುವಕರು ತಮ್ಮ ನೆರವನ್ನು ನೀಡಬೇಕು ಎಂದರೆ ಕಾರ್ಯ ಪ್ರವೃತ್ತರಾಗಬೇಕು. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ವ್ಯಾಪ್ತಿಯನ್ನು ವಿಸ್ತರಿಸಿ ರಾಷ್ಟ್ರೀಯ ಧ್ಯೇಯ ಸಂದೇಶವನ್ನು ಅದರ ಧ್ಯೇಯ ಸಂದೇಶದೊಡನೆ ಜೊತೆಗೂಡಿಸುವುದರಿಂದ ರಾಷ್ಟ್ರಾಭಿವೃದ್ಧಿಯ ಸವಾಲಿಗೆ ಉತ್ತಮ ಉತ್ತರವಾಗುತ್ತದೆ. ಈ ಶಿಸ್ತಿನ ಸಮಾಜವು ರಾಜಕೀಯ ಪಕ್ಷಗಳ ಮೇಲೆ ಆಳವಾದ ಪ್ರಭಾವವನ್ನು ಬೀರಬಲ್ಲದು.

ರಾಜಕೀಯ ದೃಷ್ಟಿಕೋನಕ್ಕೆ ತಕ್ಕಂತೆ ಶಿಸ್ತಿನ ಶಸ್ತ್ರಧಾರಿ ಪಡೆಗಳು ರಾಷ್ಟ್ರದ ಐಕ್ಯತೆಯನ್ನು ಕಾಪಾಡುವಲ್ಲಿ ಪ್ರಮುಖ ಪಾತ್ರವಹಿಸುತ್ತಿವೆ. ರಾಷ್ಟ್ರದ ನೂತನ ದೃಷ್ಟಿಕೋನ-2020ಕ್ಕೆ ''ಭಾರತವನ್ನು ಅಭಿವೃದ್ಧಿಶೀಲ ರಾಷ್ಟ್ರ''ವನ್ನಾಗಿ ಮಾಡುವುದಾಗಿದೆ. ಈ ಸಾಧನೆಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ನೂತನ ಪಾತ್ರವಹಿಸುವುದರ ಮೂಲಕ ಗೌರವಾನ್ವಿತ ಸರ್ಕಾರಕ್ಕೆ ರಾಜಕೀಯ ಮತ್ತು ಭೌಗೋಳಿಕ ವ್ಯಾಪ್ತಿಯನ್ನು ದಾಟಿ ಇಂತಹ ಯುವ ಸಂಸ್ಥೆಗಳನ್ನೂ ಬಳಸಿಕೊಂಡು ರಾಷ್ಟ್ರಾಭಿವೃದ್ಧಿಯನ್ನು ಸಾಧಿಸಬಹುದೆಂದು ತೋರಿಸಿಕೊಟ್ಟಂತಾಗುತ್ತದೆ.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ಮೂಲಕ ಬಾಲಕ/ಬಾಲಕಿಯರಿಗೆ, ಯುವಕ/ಯುವತಿಯರಿಗೆ ಶಾಲೆ ಮತ್ತು ಕಾಲೇಜುಗಳಲ್ಲಿ ಎರಡು ವರ್ಷಗಳ ಕಾಲ ಶಿಸ್ತು ಮತ್ತು ಐಕ್ಯತೆಯ ಆಧಾರದ ಮೇಲೆ ತರಬೇತಿ ನೀಡಲಾಗುತ್ತಿದೆ. 1950ರಲ್ಲಿ ಮೂರು ಲಕ್ಷವಿದ್ದ ಸಂಖ್ಯಾಬಲವು 38 ಲಕ್ಷಕ್ಕೆ ಬೆಳೆದಿದೆ ಎಂದು ನನಗೆ ತಿಳಿದುಬಂದಿದೆ.

ಕನಿಷ್ಠ 10 ಲಕ್ಷ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕಿರಿಯ ಸೇನಾನಿಗಳು ಪ್ರತಿ ವರ್ಷ ತರಬೇತಿ ಪಡೆದು ಸಮಾಜಕ್ಕೆ ಸೇರ್ಪಡೆಯಾಗಿ ಹೆಚ್ಚುತ್ತಿದ್ದಾರೆಂದು ವಿಶ್ವಾಸ ನನಗಿದೆ. ಏಕೆಂದರೆ ಪ್ರತಿಯೊಬ್ಬ ಸ್ಕೌಟ್ - ಗೈಡ್ ದೇವರಿಗೆ ,ದೇಶಕ್ಕೆ ಕರ್ತವ್ಯ ಸಲ್ಲಿಸುತ್ತೇನೆಂದು, ಇತರರಿಗೆ ಸಹಾಯ ಮಾಡುತ್ತೇನೆಂದು ಪ್ರತಿಜ್ಞೆ ಮಾಡುತ್ತಾರೆ. ಈ ವಚನದ ಪಾಲನೆಯಿಂದ ಸಾಮಾಜಿಕವಾಗಿ ಜನಜೀವನದ ಮೇಲೆ ಮೂರು ಅಂಶಗಳಲ್ಲಿ ಪ್ರಭಾವ ಬೀರಲು ಸಾಧ್ಯವಿದೆ.

1. ಕುಟುಂಬ ಮತ್ತು ಕಾರ್ಯಸ್ಥಾನದಲ್ಲಿ ಪ್ರಾಮಾಣಿಕ ಜೀವನ ವೃದ್ಧಿಸುವುದು, ಭ್ರಷ್ಟಾಚಾರ ನಿರ್ಮೂಲನೆ ಮಾಡುವುದು ಮತ್ತು ವ್ಯಕ್ತಿ ಸಾಮರ್ಥ್ಯ ಬೆಳೆಸುವುದು.

2. ಲಕ್ಷಾಂತರ ಗಿಡ ಬೆಳೆಸುವುದೂ ಸೇರಿದಂತೆ, ಸ್ವಚ್ಛ ಪರಿಸರ ವರ್ಧನೆ, ಸ್ವಚ್ಛ ಮನೆ, ಸ್ವಚ್ಛ ಕಛೇರಿ ಮತ್ತು ಸ್ವಚ್ಛ ನೆರೆ ನಿರ್ಮಾಣಮಾಡುವುದು.

3. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಕಿರಿಯ ಸೇನಾನಿಗಳು ಯಾವ ಕೆಲಸಮಾಡಿದರೂ ಶಿಸ್ತು ಮತ್ತು ಭದ್ರತೆಯಿಂದ ಮಾಡುವುದರಿಂದ ಆಸಕ್ತಿಪೂರ್ಣವಾಗಿ ಅಭಿವೃದ್ಧಿಶೀಲ ರಾಷ್ಟ್ರ ಚಳವಳಿಯಲ್ಲಿ ಸಕ್ರಿಯ ಭಾಗಿತ್ವವನ್ನು ತೆಗೆದುಕೊಳ್ಳುವರು.

## ಪ್ರಾಮಾಣಿಕ ಮನೆಗಳು

ನಾನು ಬೆಂಗಳೂರಿನಲ್ಲಿದ್ದಾಗ ಭಾರತೀಯ ವಿಜ್ಞಾನ ಸಂಸ್ಥೆಯಲ್ಲಿ ಹೀಗೆ ಹೇಳಿದ್ದೆ! ಒಂದು ದೇಶ ಭ್ರಷ್ಟ ಮುಕ್ತವಾಗಬೇಕಾದರೆ, ಒಳ್ಳೆಯ ಮನಸ್ಸಿನಿಂದ ಕಂಗೊಳಿಸಬೇಕಾದರೆ, ಈ ವ್ಯತ್ಯಾಸವನ್ನು ತರುವಂತಹ ಮೂರು ಸಾಮಾನ್ಯ ಕೀಲಿಕೈಗಳಿವೆ. ಅವುಗಳೆಂದರೆ ತಂದೆ,ತಾಯಿ ಮತ್ತು ಶಿಕ್ಷಕರು. ''ಈ ಹೇಳಿಕೆಗೆ ಓರ್ವರು ಪ್ರತಿಕ್ರಿಯಿಸಿ ಹೀಗೆ ಪತ್ರ ಬರೆದರು'' ನೀವು ಬಳಸಿದ ಮೂರು ಪದಗಳು ತಂದೆ,ತಾಯಿ ಮತ್ತು ಪ್ರಾಥಮಿಕ ಶಿಕ್ಷಕರು ಭ್ರಷ್ಟಾಚಾರವನ್ನು ತೊಡೆದುಹಾಕಬಹುದೆಂಬುದು ಕಟುಸತ್ಯ. ನಾನು ನನ್ನ ಮಗಳಿಗೆ ಸತ್ಯವನ್ನೇ ನುಡಿಯೆಂದು ಕಲಿಸಿದ್ದೇನೆ. ಸತ್ಯ ನುಡಿಯುವುದರಿಂದ ಜೀವನದಲ್ಲಿ ನಿರ್ಭೀತಿಯಿಂದ ಇರಬಹುದೆಂದು ತಿಳಿಸಿದ್ದೇನೆ. ಅವಳಿಗೀಗ 10 ವರ್ಷ. ಅವಳು 8 ವರ್ಷದವಳಿದ್ದಾಗ ಒಂದು ದಿನ ನನ್ನ ಸ್ನೇಹಿತರ ಮನೆಗೆ ಒಂದು ಸಮಾರಂಭಕ್ಕೆ ಕರೆದುಕೊಂಡುಹೋಗಿದ್ದೆ. ಅಂದು ಅವಳು ಶಾಲೆಗೆ ಹೋಗಲಾಗಲಿಲ್ಲ. ಅವಳ ರಜೆ ಚೀಟಿಯಲ್ಲಿ ಅನಿವಾರ್ಯ ಪರಿಸ್ಥಿತಿಯಿಂದಾಗಿ ಎಂಬ ಕಾರಣ ಬರೆದೆ. ಅದನ್ನು ನೋಡಿ, ಹೀಗೇಕೆ ಬರೆದಿರಿ? 'ಸ್ನೇಹಿತರ ಮನೆಗೆ ಸಮಾರಂಭಕ್ಕೆ ಹೋಗಿದ್ದೆವು' ಎಂದು ಏಕೆ ಬರೆಯಲಿಲ್ಲ ? ನೀವೇ ಹೇಳಿದ್ದಿರಿ 'ಸುಳ್ಳು ಹೇಳಬೇಡವೆಂದು'. ನಾನೇಕೆ ಸುಳ್ಳು ಹೇಳಬೇಕು? ನಂತರ ರಜೆ ಚೀಟಿಯನ್ನು ಬದಲಾಯಿಸಿ, ನಿಜವಾದ ಕಾರಣವನ್ನೇ ಬರೆದೆ. ಪ್ರಾಮಾಣಿಕ ಮನೆಯಲ್ಲಿ ಪ್ರಾಮಾಣಿಕತೆ ಬೆಳೆಯುತ್ತದೆ. ಒಮ್ಮೆ ಮಕ್ಕಳಿಗೆ ಮನಮುಟ್ಟುವಂತೆ ಕಲಿಸಿದರೆ ಅವರು ಅದನ್ನು ಪಾಲಿಸುತ್ತಾರೆ. ಮಕ್ಕಳಿಗೆ ಒಮ್ಮೆ ಸರಿಯಾದ ಮಾರ್ಗ ತೋರಿಸಿ, ಅದರಲ್ಲೇ ಸಾಗುತ್ತಾರೆ. ಚಾರಿತ್ರ್ಯಾಭಿವೃದ್ಧಿ, ಮನೆಯಿಂದಲೇ ಬೆಳೆಯಲಾರಂಭಿಸುತ್ತದೆ. ನಾನು ನನ್ನ ಮನೆಯನ್ನು ಪ್ರಾಮಾಣಿಕ ಮನೆಯನ್ನಾಗಿ ಮಾಡುತ್ತೇನೆ ಎಂಬುದು ಪ್ರತಿಯೊಂದು ಸ್ಕೌಟ್ಸ್ ಮತ್ತು ಗೈಡ್ಸ್‌ನ ಧ್ಯೇಯವಾಗಿರಬೇಕು.

## ಸ್ವಚ್ಛ ಜನವಾಸ ಪ್ರದೇಶವೇ ನನ್ನ ಗುರಿ !

ಸ್ವಚ್ಛ ಪರಿಸರವು ರಾಷ್ಟ್ರಾಭಿವೃದ್ಧಿಯ ಒಂದು ಸೂಚಕ. ಒಂದು ರಾಷ್ಟ್ರವಾಗಿ ನಾವು ನಮ್ಮ ಪರಿಸರವನ್ನು ಅಚ್ಚುಕಟ್ಟಾಗಿಡಬೇಕು ಮತ್ತು ಸ್ವಚ್ಛವಾಗಿಡಬೇಕು. ಈ ಅಭ್ಯಾಸ ಮನೆಯಿಂದಲೇ ಪ್ರಾರಂಭವಾಗಬೇಕು. ಸಮಗ್ರ ಸುಂದರ ಪರಿಸರವನ್ನು ನಮಗೆ ನೀಡಲು ಹಾಗು ಜನತೆಯ ಆರೋಗ್ಯವನ್ನುಸುಧಾರಿಸಲು ಇಂತಹ ಪರಿಸರ ಅವಶ್ಯಕ. ದೇವಾಲಯಗಳನ್ನು , ನದಿಗಳನ್ನು ಸ್ವಚ್ಛವಾಗಿಡುವುದರಿಂದ, ಅಚ್ಚುಕಟ್ಟಾಗಿಡುವುದರಿಂದ ಅವುಗಳ ಆಂತರಿಕ ಪಾವಿತ್ರ್ಯತೆಯನ್ನು ಕಾಪಾಡಿದಂತಾಗುತ್ತದೆ. ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸದಸ್ಯರು ಸ್ವಚ್ಛ ಜನವಾಸ ಪ್ರದೇಶ ಚಟುವಟಿಕೆಯನ್ನು ತಮ್ಮ ವಾಸ ಮತ್ತು ಸುತ್ತಮುತ್ತಲಿನಲ್ಲಿ ಪರಿವರ್ತಿಸಬಹುದು. ''ಸ್ವಚ್ಛ ಭಾರತದ'' ಪರಿಕಲ್ಪನೆಯನ್ನು ಪಟ್ಟಣಗಳಲ್ಲೂ ,ಹಳ್ಳಿಗಳಲ್ಲೂ ಜಾಗೃತಗೊಳಿಸಿ ಅಭಿವೃದ್ಧಿಗೊಳಿಸಬಹುದು. ಈ ಕಾರ್ಯವು ಆರೋಗ್ಯಕರ ಪರಿಸರವನ್ನು ಉಂಟುಮಾಡಲು ಮುಂದಾಗುತ್ತದೆ. ಜನತೆಗೆ ವಿವಿಧ ರೀತಿಯ ಕಾರ್ಯವನ್ನು ಮಾಡಲು ಉತ್ತಮ ರೀತಿಯಲ್ಲಿ ಉತ್ಪಾದನೆ ಮಾಡಲು ಸ್ವಚ್ಛ ಪರಿಸರ ಅನುವುಮಾಡಿಕೊಡುತ್ತದೆ. 'ನಾನು ನನ್ನ ಮನೆಯ ರಸ್ತೆಯನ್ನು ಅತ್ಯಂತ ಸ್ವಚ್ಛವಾಗಿಡುತ್ತೇನೆ' ಎಂಬುದು ಪ್ರತಿಯೊಬ್ಬ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸೇನಾನಿಗಳ ಅಭಿಲಾಷೆಯಾಗಿರಬೇಕು.

## ''ಅಭಿವೃದ್ಧಿ ಹೊಂದಿದ ಭಾರತದ '' ಚಳವಳಿಯಲ್ಲಿ ಉತ್ಸಾಹಪೂರ್ಣ ಭಾಗಿತ್ವ

ನಮ್ಮ ರಾಷ್ಟ್ರವು ಬಡತನದ ರೇಖೆಯ ಕೆಳಗಿರುವ ಇಪ್ಪತ್ತಾರು ಮಿಲಿಯನ್ ಜನರನ್ನು ಮೇಲೆತ್ತುವ ಸವಾಲನ್ನು ಎದುರಿಸುತ್ತಿದೆ. ಅವರಿಗೆ ವಸತಿಯ ಅಗತ್ಯವಿದೆ, ಆಹಾರದ ಅಗತ್ಯವಿದೆ, ಆರೋಗ್ಯದ ಬಗ್ಗೆ ಕಾಳಜಿಯ ಅಗತ್ಯವಿದೆ, ಶಿಕ್ಷಣದ ಅಗತ್ಯವಿದೆ, ಉದ್ಯೋಗದ ಅಗತ್ಯವಿದೆ. ಒಟ್ಟಿನಲ್ಲಿ ಹೇಳುವುದಾದರೆ ಅವರ ಜೀವನಮಟ್ಟ ಸುಧಾರಿಸಬೇಕಾದ, ಉತ್ತಮವಾಗಬೇಕಾದ ಅಗತ್ಯವಿದೆ. ರಾಷ್ಟ್ರೀಯ ಜಿ.ಡಿ.ಪಿ. ಪ್ರತಿವರ್ಷ ಶೇಕಡಾ 6 ರಷ್ಟು ಹೆಚ್ಚುತ್ತಿದೆ. ಆದರೆ ಆರ್ಥಿಕ ತಜ್ಞರ ಪ್ರಕಾರ ಬಡತನದ ರೇಖೆಯಿಂದ ಜನರನ್ನು ಮೇಲೆತ್ತಲು ಒಂದು ದಶಕ, ಪ್ರತಿವರ್ಷ ಕನಿಷ್ಠ ಶೇಕಡ ಹತ್ತರಷ್ಟು ನಿರಂತರವಾಗಿ ಹೆಚ್ಚಾಗಬೇಕಿದೆ.

ಸಮನ್ವಯಗೊಳಿಸಿದ ಕಾರ್ಯ : ಜನರ ಅವಶ್ಯಕತೆಯನ್ನು ಪೂರೈಸಲು ಭಾರತವನ್ನು ಅಭಿವೃದ್ಧಿಶೀಲ ರಾಷ್ಟ್ರವನ್ನಾಗಿ ಮಾಡುವ ಧ್ಯೇಯ ಸಂದೇಶವನ್ನು ಹೊಂದಿದ್ದೇವೆ. ಭಾರತಕ್ಕೆ ಸಮನ್ವಯಗೊಳಿಸಿದ ಕಾರ್ಯವನ್ನುಸಮರ್ಥವಾಗಿ ನಿರ್ವಹಿಸಬಲ್ಲ ಐದು ಕ್ಷೇತ್ರಗಳನ್ನು ಗುರುತಿಸಿದ್ದೇವೆ. 1) ಕೃಷಿ ಮತ್ತು ಆಹಾರ ಸಂಸ್ಕರಣೆ 2) ರಾಷ್ಟ್ರದ ಮೂಲೆಮೂಲೆಗೂ ನಂಬಲರ್ಹವಾದ ಗುಣಾತ್ಮಕ ವಿದ್ಯುಚ್ಛಕ್ತಿ ಸಾರಿಗೆ ಸೌಲಭ್ಯ ಮತ್ತು ಮೂಲ ಸೌಲಭ್ಯಗಳು 3) ಶಿಕ್ಷಣ ಮತ್ತು ಆರೋಗ್ಯ 4) ಸಂಪರ್ಕ ಮತ್ತು ಮಾಹಿತಿ ತಂತ್ರಜ್ಞಾನ 5) ಆಯಕಟ್ಟಿನ ವಿಭಾಗ, ಈ ಐದು ಕ್ಷೇತ್ರಗಳು ನಿಕಟವಾದ ಆಂತರಿಕ ಸಂಬಂಧ ಹೊಂದಿರುವ ಕ್ಷೇತ್ರಗಳಾಗಿವೆ. ಈ ಕ್ಷೇತ್ರಗಳಲ್ಲಿ ಉತ್ತಮ ಸಾಧನೆಮಾಡಿದರೆ ಆಹಾರ, ಆರ್ಥಿಕ ಮತ್ತು ಭದ್ರತೆಯತ್ತ ರಾಷ್ಟ್ರವು ಸಾಗುತ್ತದೆ.

ಅಗತ್ಯ ಸಂಪರ್ಕಗಳು : 1. ಗ್ರಾಮ ಗುಚ್ಛಗಳಿಗೆ ಭೌತಿಕ ಸೌಲಭ್ಯಗಳನ್ನು ಏರ್ಪಡಿಸುವ ಗುಣಾತ್ಮಕ ರಸ್ತೆ ಮತ್ತು ಸಾರಿಗೆ. 2. ಆಧುನಿಕ ತಂತ್ರಜ್ಞಾನ ಹೊಂದಿರುವ ಮಾಹಿತಿ ಮತ್ತು ಸಂಪರ್ಕತಂತ್ರ, ಅಂತರಜಾಲಗಳು ನಗರದಿಂದ ಗ್ರಾಮಕ್ಕೆ 3. ಶಿಕ್ಷಣದ ಮೂಲಕ ಜ್ಞಾನ ಸಂಪರ್ಕ, ರೈತ ಕುಶಲಕರ್ಮಿಗಳು, ಕಸುಬುದಾರರು, ವ್ಯಾಪಾರಿಗಳಿಗೆ, ತರಬೇತಿ ಸಾರಿಗೆ ಸಂಪರ್ಕ, ಮಾಹಿತಿ ಸಂಪರ್ಕ, ಶಿಕ್ಷಣ ಮತ್ತು ತರಬೇತಿ ಸಂಪರ್ಕ ಈ ಮೂರೂ ಸಂಪರ್ಕಗಳನ್ನು ಏರ್ಪಡಿಸಿ ಅಗತ್ಯವಾದ ಆರ್ಥಿಕ ನೆರವನ್ನು ಬ್ಯಾಂಕ್, ಸಣ್ಣಪ್ರಮಾಣದ ಸಾಲ ಮತ್ತು ಉತ್ಪನ್ನಗಳ ಮಾರಾಟಗಳ ವ್ಯವಸ್ಥೆಯನ್ನು ಮಾಡಬೇಕಾದ ಅಗತ್ಯವಿದೆ.

## ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನಮ್ಮ ಶಿಕ್ಷಣ ವ್ಯವಸ್ಥೆಯ ಅವಿಭಾಜ್ಯ ಅಂಗ :

ಉತ್ತಮ ಜನಾಂಗವನ್ನು ರೂಪಿಸಲು ಭಾರತವನ್ನು ಅಭಿವೃದ್ಧಿಶೀಲ ರಾಷ್ಟ್ರವಾಗಿ ಮಾಡಲು ಮೌಲ್ಯಾಧಾರಿತ ಶಿಕ್ಷಣ ಕೊಡುಗೆಯಾಗುತ್ತದೆಂದು ನಾನು ಸಲಹೆ ಮಾಡಿದ್ದೇನೆ. ಪ್ರಸ್ತುತ ಸ್ಥಿತಿಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ತನ್ನ ನೂತನ ಧ್ಯೇಯಸಂದೇಶದ ಮೂಲಕ ಶಿಕ್ಷಣ ಪದ್ಧತಿಯಲ್ಲಿ ಅಪೇಕ್ಷಿತ ಬದಲಾವಣೆಗಳನ್ನು ತರಬಲ್ಲದು. ಇದರಿಂದ ಸಮಾಜದ ಮೇಲೆ ಉತ್ತಮ ಪ್ರಭಾವವನ್ನು ಉಂಟುಮಾಡಬಹುದು. ಸಮಾಜದ ಮೇಲೆ ಈ ಸಂಸ್ಥೆಯು ಬೀರುತ್ತಿರುವ ಪ್ರಭಾವವನ್ನು ನಾವೆಲ್ಲರೂ ಮೆಚ್ಚುತ್ತೇವೆ. ಆದ್ದರಿಂದ ಈ ಸಂಸ್ಥೆಯ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸಿ ವಿಸ್ತರಿಸಬೇಕಾಗಿದೆ.

ನನ್ನ ದೃಷ್ಟಿಯಲ್ಲಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಎರಡು ವರ್ಷಗಳಲ್ಲಿ ಹಾಲಿ ಇರುವ ವಾರ್ಷಿಕ ಸೇರ್ಪಡೆ 3 ಲಕ್ಷವನ್ನು ಪ್ರತಿ ವರ್ಷಕ್ಕೆ 10 ಲಕ್ಷದಂತೆ ಬರಲಿರುವ 2 ವರ್ಷಗಳಲ್ಲಿ ಪ್ರತಿವರ್ಷವೂ ಹೆಚ್ಚಿಸಬಹುದಾಗಿದೆ. ಇದಕ್ಕಾಗಿ ಸರ್ಕಾರ ಮತ್ತು ಉದಾರದಾನ ಮಾಧ್ಯಮಗಳ ನೆರವು ಬೇಕಾಗುತ್ತದೆ. ಏನೇ ಆದರೂ ಸಾಮಾಜಿಕ ಅಭಿವೃದ್ಧಿ ಮತ್ತು ಶಾಂತಿ ಸ್ಥಾಪನೆಗಾಗಿ ಈ ಸಂಸ್ಥೆಯು ನೀಡುತ್ತಿರುವ ಮಾನವ ಸಂಪನ್ಮೂಲವಾದ ಶಿಸ್ತಿನ ಯುವಕ-ಯುವತಿಯರ ಮೂಲಕ ಇದು ಸಮದೂಗಿಸಲ್ಪಡುತ್ತದೆ.

### ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ 5 ಅಂಶಗಳ ಪ್ರಮಾಣ ವಚನ :

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸೈನ್ಯವು ಜ್ಞಾನವಂತ ನಾಗರೀಕರಿಗೆ ಉದಾಹರಣೆಯಾಗಿದ್ದು ಸಮಾಜಕ್ಕೆ ಮೇಲ್ಪಂಕ್ತಿಯಾಗಿದ್ದಾರೆ. ಹೀಗೆ ಅವರ ಜವಾಬ್ದಾರಿ ಅವರಿಗೆ ಸೀಮಿತವಾಗಿರದೆ, ಸಮಗ್ರ ಸಮಾಜದ ಜವಾಬ್ದಾರಿಯನ್ನು ನಿಭಾಯಿಸಬೇಕಾಗುತ್ತದೆ. ಈ ಧ್ಯೇಯೋದ್ದೇಶ ಸಾಧನೆಗಾಗಿ ತಮ್ಮ ಪಾತ್ರ ಮತ್ತು ಜವಾಬ್ದಾರಿಯನ್ನು ನಿರಂತರವಾಗಿ ನಿರ್ವಹಿಸುವುದರಿಂದ ಅವರಿಗೆ ಶುಭವಾಗುತ್ತದೆ. ಸಾಮಾಜಿಕ ಮಾರ್ಪಾಟಿಗಾಗಿ ಮತ್ತು ರಾಷ್ಟ್ರೀಯ ಅಭಿವೃದ್ಧಿಗಾಗಿ ನಾನು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸೇನಾನಿಗಳಿಗೆ 5 ಅಂಶದ ಪ್ರಮಾಣ ವಚನವನ್ನು ಬೋಧಿಸಲು ಇಚ್ಛಿಸುತ್ತೇನೆ.

1. ಪ್ರಾಮಾಣಿಕ ಮನೆ : ಪ್ರಾಮಾಣಿಕ ಮನೆಯನ್ನು ಸ್ಥಾಪಿಸಲು ನಾನು ಜವಾಬ್ದಾರನಾಗುತ್ತೇನೆ. ಪ್ರಾಮಾಣಿಕತೆ ವ್ಯಕ್ತಿಯ ಮನಸ್ಸಿನಲ್ಲಿ ಬೇರೂರಿದ್ದರೆ ಅವರ ಚಾರಿತ್ರ್ಯ ಮೆರಗು ನೀಡುತ್ತದೆ ಎಂದು ಮನಗಂಡಿದ್ದೇನೆ. ಚಾರಿತ್ರಿಕ ಸೌಂದರ್ಯವು ಮನೆಯಲ್ಲಿ ಸಾಮರಸ್ಯವನ್ನು ಅರಳಿಸುತ್ತದೆ. ಮನೆಯಲ್ಲಿನ ಸಾಮರಸ್ಯವು ರಾಷ್ಟ್ರದ ಶಿಸ್ತಿಗೆ ದಾರಿಮಾಡಿ ಕೊಡುತ್ತದೆ. ರಾಷ್ಟ್ರದ ಶಿಸ್ತು ಭೂಗ್ರಹದಲ್ಲಿ ಶಾಂತಿಯನ್ನು ಉಂಟುಮಾಡುತ್ತದೆ.

2. ಸ್ವಚ್ಛ ಮನೆ ಮತ್ತು ಜನವಾಸ ಪ್ರದೇಶ : ನಾನು ಮಾದರಿಯಾಗಿ ಸುಂದರ ಮನೆಯ ಪರಿಕಲ್ಪನೆಯನ್ನು ನೆರೆಯಲ್ಲಿ ನನ್ನ ಮನೆಯಿಂದ ಆರಂಭಿಸಿ ಪರಿಸರ ಮಹತ್ವದ ಧ್ಯೇಯ ಸಂದೇಶವನ್ನು ಸಾರುತ್ತೇನೆ. ನಾನು ನಿರಂತರ ಪರಿಸರ ಅಭಿವೃದ್ಧಿಗಾಗಿ ಪರಿಸರದ ಮೇಲೆ ಯಾವ ದುಷ್ಪರಿಣಾಮವೂ ಆಗದಂತೆ ಕಾರ್ಯನಿರ್ವಹಿಸುತ್ತೇನೆ ಮತ್ತು ಗಿಡಗಳನ್ನು ನೆಡುವ ಮೂಲಕ, ರಸ್ತೆಗಳನ್ನು ಸ್ವಚ್ಛವಾಗಿಡುವ ಮೂಲಕ, ಜನಸಂಖ್ಯೆಯನ್ನು ನಿಯಂತ್ರಿಸುವ ಮೂಲಕ ಉತ್ತಮ ಪರಿಸರ ನಿರ್ಮಾಣ ಮಾಡಲು ನೆರವಾಗುತ್ತೇನೆ.

3. ಪರಿಶುದ್ಧ ಚಿಂತನೆ : ನಾನು ಪರಿಶುದ್ಧ ಚಿಂತನೆಯ ಸಂದೇಶವನ್ನು ಯುವಕ ಯುವತಿಯರಲ್ಲಿ ಸಾರುತ್ತೇನೆ ಮತ್ತು ಸಮಾಜವು ಸ್ತ್ರೀಯರ ಮರ್ಯಾದೆಯನ್ನು ಕಾಪಾಡುವಂತೆ ಮಾಡುತ್ತೇನೆ.

4. ನನ್ನ ಜೀವನವೇ ಒಂದು ಸಂದೇಶ : ನನ್ನ ಜೀವನದ ಚಿಂತನೆ ಮತ್ತು ಕಾರ್ಯಗಳ ಸಂದೇಶವು ಯುವಜನಾಂಗಕ್ಕೆ ಮೇಲ್ಪಂಕ್ತಿಯಾಗಿರುತ್ತದೆಂದು ಭರವಸೆ ನೀಡುತ್ತೇನೆ. ನಾನು ಪ್ರಾಮಾಣಿಕ ಮತ್ತು ಭ್ರಷ್ಟ ಮುಕ್ತ ಜೀವನವನ್ನು ನಡೆಸುತ್ತೇನೆ. ಪಾರದರ್ಶಕ ಜೀವನ ಅನುಸರಿಸಲು ಎಲ್ಲರಿಗೂ ಮಾದರಿಯಾಗುತ್ತೇನೆ.

5. ನನ್ನ ರಾಷ್ಟ್ರದ ಆಚರಣೆ : ನನ್ನ ಸಹಚರರ ಮತ್ತು ನನ್ನ ರಾಷ್ಟ್ರದ ಪ್ರತಿ ಯಶಸ್ಸನ್ನು ಆಚರಿಸುತ್ತೇನೆ.

### ಉಪಸಂಹಾರ

ರಾಷ್ಟ್ರ ನಿರ್ಮಾಣಕ್ಕೆ ಹೆಚ್ಚಿನ ಸಂಖ್ಯೆಯ ಜ್ಞಾನವಂತ ಯುವಕ-ಯುವತಿಯರ ಅವಶ್ಯಕತೆ ಇದೆ. ಯುವ ಜನಾಂಗದ ಮುಖ್ಯ ಸಾಧನೆಯಲ್ಲಿ ಶಿಸ್ತು ಒಂದು ಮುಖ್ಯ ಅಂಶ. ಇದನ್ನು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿಗಳು ನೀಡಬಹುದಾಗಿದೆ. ನಾನು ಈಗ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸೇನಾನಿಗಳು ಬೆಳೆಸಿಕೊಳ್ಳಬೇಕಾದ ಒಂದು ಮುಖ್ಯ ಹೆಚ್ಚುವರಿ ಗುಣಾಂಶವನ್ನು ನೀಡುತ್ತೇನೆ. ಶಿಸ್ತಿನ ಜೊತೆಗೆ ಅಸೀಮಿತ ಸ್ಫೂರ್ತಿ ಹೊಂದಿರಬೇಕು ಇದು ಎರಡು ಘಟಕಗಳನ್ನು ಹೊಂದಿದೆ. ಮೊದಲನೆಯದು ಉಚ್ಚಗುರಿಯ ಸಾಧನೆಯತ್ತ ದೃಷ್ಟಿ. ಎರಡನೆಯದು ಸವಾಲನ್ನು ಎದುರಿಸುವ ಸ್ಫೂರ್ತಿ 2500 ವರ್ಷಗಳ ಹಿಂದೆ ಸಂತ ಕವಿ ತಿರುವಳ್ಳುವರ್ ಬರೆದ ತಿರುಕ್ಕುರಲ್‌ನ ಎರಡು ಸಾಲು ಇಲ್ಲಿ ಜ್ಞಾಪಿಸಿಕೊಳ್ಳಲು ಇಚ್ಛಿಸುತ್ತೇನೆ.

ಅದರ ಅರ್ಥ : 'ಕೊಳದ ಅಥವಾ ಕೆರೆಯ ಆಳ ಎಷ್ಟೇ ಇರಬಹುದು. ನೀರಿನ ಸ್ಥಿತಿ ಹೇಗೇ ಇರಬಹುದು. ತಾವರೆ ಮೊಗ್ಗು ಬೆಳೆದೇ ಬೆಳೆಯುತ್ತದೆ. ಹಾಗೆಯೇ ಅರಳೇ ಅರುಳುತ್ತದೆ. ಮನುಷ್ಯನಿಗೆ ಗುರಿಯನ್ನು ಸಾಧಿಸಿದ ಛಲವಿದ್ದರೆ ಅಸಾಧ್ಯವಾದರೂ ಸಹ ಸಾಧಿಸಿಯೇ ಸಾಧಿಸುತ್ತಾನೆ.'

''ಸಾಧನೆಯ ಮಾರ್ಗ ಕಾಣುವುದಿಲ್ಲ ಎಂಬ ಅನುಭವ ನಿಮಗಿರಬಹುದು ಅದು ಅನೇಕ ಅಡೆತಡೆಗಳಿಂದ ಕೂಡಿದೆ''

ಇದೇ ಕವಿಯ ಮತ್ತೊಂದು ದ್ವಿಪದಿ ಇಲ್ಲಿ ಜ್ಞಾಪಕ್ಕೆ ಬರುತ್ತದೆ.

'ಯಾವ ಸಮಸ್ಯೆಗೂ ಸೋಲನ್ನು ಒಪ್ಪಿಕೊಳ್ಳಬಾರದು. ನಾವು ಪರಿಸ್ಥಿತಿಯ ನಾಯಕರಾಗಿ ಸಮಸ್ಯೆಯನ್ನು ಸೋಲಿಸಬೇಕು. ' ಈ ಎರಡು ತಿರುಕ್ಕುರಲ್‌ಗಳು ಅಸೀಮಿತ ಸ್ಫೂರ್ತಿ ಲಕ್ಷಣಗಳನ್ನು ಸ್ಪಷ್ಟಪಡಿಸುತ್ತದೆ.

ಮನೆಯಲ್ಲಿ ಮತ್ತು ಕುಟುಂಬಗಳಲ್ಲಿ ಚಾರಿತ್ರ್ಯಶೀಲರಾಗಿ ಬೆಳೆದು, ಶಾಲೆಯಲ್ಲಿ ಮೌಲ್ಯಾಧಾರಿತ ಶಿಕ್ಷಣಪಡೆದು, ಎರಡು ವರ್ಷ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ನೀಡುವ ಶಿಸ್ತು ಮತ್ತು ಒಗ್ಗಟ್ಟಿನ ತರಬೇತಿ ಪಡೆದು ಜೊತೆಗೆ ಸೀಮಾತೀತ ಸ್ಫೂರ್ತಿಯನ್ನು ಬೆಳೆಸಿಕೊಂಡರೆ ಪ್ರಗತಿ ಪೂರ್ವಕ ಆನಂದದಾಯಕ ಮತ್ತು ಶಾಂತಿಯುತ ಭಾರತ ನಿರ್ಮಾಣದಲ್ಲಿ ಹೆಮ್ಮೆಯ ಕೊಡುಗೆಯನ್ನು ಸಮರ್ಥವಾಗಿ ನೀಡುವರೆಂಬ ಭರವಸೆ ನನಗಿದೆ.

ನಿಮ್ಮ ಧ್ಯೇಯ ಸಂದೇಶಗಳ ಸಾಧನೆಗೆ ನನ್ನ ಶುಭಾಶಯಗಳು, ದೇವರು ನಿಮ್ಮನ್ನು ಆಶೀರ್ವದಿಸಲಿ.

ಕೃಪೆ : ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್ ವಾರ್ತಾ ಪತ್ರಿಕೆ.

ಕಲಿಯಲು ತಿರಸ್ಕರಿಸುವುದು, ಜೀವಿಸಲು ತಿರಸ್ಕರಿಸುವುದಕ್ಕೆ ಸಮನಾದುದು - ರಾಮಕೃಷ್ಣ ಪರಮಹಂಸ.



# ಬುಕನನ್ ಕಂಡ ದಾವನ ಗಿರಿ

ಡಾ|| ಎಂ.ಜಿ. ಈಶ್ವರಪ್ಪ,
ಪ್ರಾಂಶುಪಾಲರು,
ಎಂ.ಎಸ್.ಬಿ.ಪದವಿ ಕಾಲೇಜ್. ದಾವಣಗೆರೆ

ಫ್ರಾನ್ಸಿಸ್ ಬುಕನನ್ ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಮೈಸೂರು ಪ್ರಾಂತ್ಯದಲ್ಲಿ ಓಡಾಡಿದ ಒಬ್ಬ ಪ್ರವಾಸಿ. ಕಲ್ಕತ್ತಾದಲ್ಲಿನ ಈಸ್ಟ್ ಇಂಡಿಯಾ ಕಂಪನಿ ಆದೇಶದ ಮೇರೆಗೆ ದಕ್ಷಿಣ ಭಾರತದ ಕೆಲ ಭಾಗಗಳ ಸಂಪನ್ಮೂಲವನ್ನು ಕುರಿತ ವರದಿಯನ್ನು ಕಂಪನಿಗೆ ಒಪ್ಪಿಸಿದ್ದಾನೆ. ಈ ಭಾಗದ ನೆಲ, ಜಲ, ವ್ಯವಸಾಯ, ಕಲೆ, ಖನಿಜ ಸಂಪತ್ತು, ಕೈಗಾರಿಕೆ, ಕುಶಲ ಕೈಗಾರಿಕೆ, ಜನರ ಸ್ಥಿತಿ-ಗತಿ ಮುಂತಾದ ವಿವರಗಳನ್ನು ಒಪ್ಪಿಸುವುದು ಅವನ ಕೆಲಸವಾಗಿತ್ತು. ಕುದುರೆಗಳ ಮೇಲೆ ಹಲವು ಜನರ ತಂಡದೊಡನೆ ಅವನು ಪ್ರಯಾಣ ಮಾಡುತ್ತಾನೆ. ಕ್ರಿ.ಶ. 1801 ರಲ್ಲಿ ಅವನ ಪ್ರವಾಸ ನಡೆದಿದೆ. ಬುಕನನ್ ಒಬ್ಬ ಅಸಾಮಾನ್ಯ ಬುದ್ಧಿವಂತ ಮತ್ತು ಸೂಕ್ಷ್ಮ ಗ್ರಾಹಿ. ತಾನು ಕಂಡದ್ದನ್ನು ತಾನು ಕೇಳಿದ್ದನ್ನು ತನಿಖೆ ಮಾಡಿ ಕಣ್ಣಿಗೆ ಕಟ್ಟುವಂತೆ ವರದಿ ಮಾಡುತ್ತಾನೆ. ಅವನ ವರದಿ ಮೂರು ಸಂಪುಟಗಳಲ್ಲಿ ಕ್ರಿ.ಶ. 1807ರಲ್ಲಿ ಪ್ರಕಟವಾಗಿದೆ. ಆ ವರದಿಯ ಶೀರ್ಷಿಕೆ A Journey from Madras through Mysore Canara and Malabar. ಇದೊಂದು ಅಮೂಲ್ಯ ಗ್ರಂಥಗಳ ಸಂಪುಟ.

ಕ್ರಿ.ಶ. 1801ರ ಏಪ್ರಿಲ್ ತಿಂಗಳು ಬುಕನನ್ ಶಿವಮೊಗ್ಗದ ಕಡೆಯಿಂದ ದಾವಣಗೆರೆಯ ಕಡೆ ಬರುತ್ತಾನೆ. ಸಾಸ್ವೆಹಳ್ಳಿ, ಬಸವಾಪಟ್ಟಣ, ಮಲೆಬೆನ್ನೂರು, ಹರಿಹರ, ದಾವಣಗೆರೆ, ಕೊಡಗನೂರು, ಭೀಮಸಮುದ್ರ, ಚಿತ್ರಕಲ್ಲುದುರ್ಗ ಹೀಗೆ ಅವನ ಪ್ರವಾಸದ ಮಾರ್ಗ. ಏಪ್ರಿಲ್ 11 ರಂದು ಅವನದು ದಾವಣಗೆರೆಯಲ್ಲಿ ವಾಸ್ತವ್ಯ.

ಹರಿಹರದಿಂದ ದಾವಣಗೆರೆಗೆ ಬರುವ ಮಾರ್ಗದಲ್ಲಿನ ಮೂರು ಗುಡ್ಡಗಳನ್ನು (ಬಾತಿ ಗುಡ್ಡಗಳು) ಅವನು ಗುರುತು ಮಾಡುತ್ತಾನೆ. ಅವನ ಪ್ರಕಾರ 'ದಾವನ-ಗಿರಿ' ಯು 500 ಮನೆಗಳ ಊರು. ಹೈದರಾಲಿಯಿಂದ ಜಹಗೀರಾಗಿ ಪಡೆದ ಮರಾಠರ ಮುಖ್ಯಸ್ಥ 'ಅಪೋಜಿ ರಾಮ' ಎನ್ನುವವನು ಅದನ್ನು ಆಳುತ್ತಿದ್ದ. ಹೊಸದೊಂದು ಬಜಾರನ್ನು ಕಟ್ಟುತ್ತಿದ್ದರು. ಆಗಲು ವ್ಯಾಪಾರವೇ ನಗರದ ಪ್ರಮುಖ ಕಸುಬಾಗಿತ್ತು. ಇಕ್ಕೇರಿಯ ಸಾಗರದಿಂದ ಅಡಿಕೆ ಮತ್ತು ಮೆಣಸು ತರಿಸಿ ಅರ್ಕಾಟ್ ಹತ್ತಿರದ ವಲ್ಲಜಪೇಟೆಗೆ ಕಳಿಸುವುದು. ವಲ್ಲಜಪೇಟೆಯಿಂದ ಮದ್ರಾಸಿಗೆ ಯುರೋಪ್, ಚೀನಾ ಮುಂತಾದ ರಾಷ್ಟ್ರಗಳಿಂದ ಬಂದ ಪದಾರ್ಥಗಳನ್ನು ತರಿಸುವ ವಹಿವಾಟು ನಡೆಯುತ್ತಿತ್ತು. ಈ ಸಾಗಾಣಿಕೆ ಕೆಲಸಕ್ಕೆ ವರ್ತಕರು ತಮ್ಮದೇ ಆದ ಎತ್ತಿನ ಬಂಡಿಗಳನ್ನು ಅಥವಾ ಬಾಡಿಗೆ ಬಂಡಿಗಳನ್ನು ಬಳಸುತ್ತಿದ್ದರು. ದಾವನಗಿರಿಯ ಸುತ್ತಮುತ್ತ ಹತ್ತಿ ಬೆಳೆಯಲಾಗುತ್ತಿತ್ತು. ಸಾಕಿದ ಕುರಿ ಮಂದೆಯಿಂದ ಉತ್ತಮ ಕಂಬಳಿ ತಯಾರಿಸಲಾಗುತ್ತಿತ್ತು. ಬೆಲ್ಲದ ಉತ್ಪಾದನೆಯ ಜೊತೆಗೆ ಶೇಂಗಾ ಬೆಳೆಯು ಇತ್ತು. ಸುಮಾರು 200 ವರ್ಷಗಳ ಹಿಂದೆಯೂ ದಾವನಗಿರಿಯು ವಾಣಿಜ್ಯದ ಪ್ರಧಾನ ಕೇಂದ್ರವಾಗಿ ಸಾಗರದಿಂದ ವಲ್ಲಜಪೇಟೆಯವರೆಗೆ ಸುಮಾರು 320 ಮೈಲಿಯ ವಹಿವಾಟು ನಡೆಸುತ್ತಿತ್ತು.

ಫ್ರಾನ್ಸಿಸ್ ಬುಕನನ್ ಮೊದಲ ಸಂಪುಟದಲ್ಲಿ ಕಂಡು ಬರುವ ದಾಖಲೆ ಇಂತಿದೆ. 1801 ಏಪ್ರಿಲ್ 11ರ ವರದಿ ಇದು.

April 11th - I went Three cosses to Davana-giri. Near the road, three small hills excepted, the whole country is fit for the plough. Much of it however, even where the soil is of that fine black mould called Eray, would appear never to have been cultivated, and is overgrown with bushes. The soil of a very small proportion indeed, so far as I can judge, appears to be too bareen for cultivation; much of it, however, is Marulu, or a poor stoney land, and some of it is a red soil, fit for the cultivation of Ragy.

Davan-giri contains above 500 houses, and a new Bazar ( or street containing shops) is now building. In the centre of the town is a small mud fort. Some years ago, it was a poor village; and its rise is owing to the encouragement given to settlers by Apojee Rama, a Marattah chief, who, having entered into the servide of Hyder, obtained the place as a Jaghire. He died without heirs, but Tippoo continued to give encouragement to settlers, and ever since it has been gradually increasing. It is the first place in the Chatrakal principality (Rayada) towards the west; and the Amildar of the district (Taluc) usually resides at it, although properly it is not the Kasba, or chief town.

At Davana-giri some coarese cotton cloths are made; and at every village of the district three or four looms are employed in the manufacture. The staple commodity, however, of the Chatrakal principality consists of Cumlies, or a kind of blankets which in their fabric greatly resemble English camblets. They are four cubits broad, by twelvve

ತನ್ನನ್ನು ತಾನು ಆಳಿಕೊಳ್ಳಲಾಗದವನನ್ನು, ಬೇರೆಯವರು ಆಳುತ್ತಾರೆ – ಲಾಂಗ್ ಫೆಲೋ.

long, and form a piece of dress, which the natives of Karnataka almost universally wear. They are not dyed, but are of the natural colour of the wool, which in the finer ones is almost always a good black. The best are made at Hara-punya-hully, in the territory lately ceded to the company, and at Davana-giri. Each of the blankets, made of the wool from the first shearing of the sheep, sells for from two to twelve Pagodas, or from16s, 21/4d. to 41 17s. 4d. Those at four Pagodas are the fines made for common sale; and these with all of an inferior value, are brought to weekly markets, and purchased by the merchant for ready money. If any of a higher value are wanted, advances must be made. The great excellence of these blankets is their power of turning rain; and, the finer they are, the better they do this. Some have been made, that were valued so high as from two to three hundred Rupees, and that were considered to be impenetrable by water.

Before the sheep are shorn, they are well washed. The wool, when it has been shorn, is teased with the fingers, and then beaten with a bow, like cotton, and formed into bundles for spinning. This operation is performed both by men and women, partly on the small Hindu cotton wheel, and partly with the distaff. Some tamarind-seeds are bruised; and, after having been infused for a night in cold water, are boiled. The thread, when about to be put into the loom, is sprinkled with the cold decoction. The loom is of the same simple structure with that usual in India. The new made cloth is washed by beating it on a stone; and, when dried, is fit for sale. From this account of the process it will be evident, that the great price of the finer kinds is owing to the great trouble required in selecting wool sufficiently fine, the quantity of which in any one fleece is very small.

Davana-giri is a place of considerable trade, and is the residence of many merchants, who keep oxen, and send goods to distant places. Some of the merchants hire their cattle from Sivabhactars, Mussulmans, and Marattahs, who make the carriage of goods a profession, and are called Badigaru. The load is reckoned 8 Maunds of 48 Cucha seers, or about 233lb., and the hire is estimated by this quantity, whatever load the owner may choose to put on his cattle. The hire for a load to any place near, is one Fanam, or almost 7.5 pence, for every Gau or Gavada of 4 cosses, which amount upon an average, I suppose, to between 12 and 14 miles; but to the great marts at a distance there is a fixed price; for instance, the load from Sagar, near Ikeri, to Wallaja-petta, near Arcot, Costs 3 Pagodas, or 11.4s. 4.5d. The distance may be about 320 miles.

Far from considering the customs exacted at different places on the road as a burthen, the traders here consider them as advantageous; for the custom house is bound to pay for all goods that may be stolen, or seized by robbers, within their respective districts. This seems to be an excellent regulation, which is in general use throughout the peninsula.

The most valuable trade here is that which is carried on with Wallaja-petta. The goods carried from hence are Betel-nut and pepper, and those brought back are Madras goods, imported from Europe, China, Bengal, and the Eastern Islands, together with salt, and some of the manufactures of the coast of Coromandel.

There is also a great trade carried on between this and Nagara, and Sagar. From hence are brought Betel-nut, pepper, and Capsicum. The returns are, a little cotton wool, and cloth, cumlies and a large proportion of cash.

To Caduru, and other places south from this, are sent cotton, cloth, and Terra Japonica; and from them are brought coco-nuts, tobacco, turmeric, fenugreek, garlic, and Danya, a carminative seed. The manufactures of this neighbourhood frequently carry their blankets to Seringapatam.

Merchants from the Marattah territories

beyond the Tungabhadra bring hither silk cloths, cotton, Terra Japonica, and wheat; and take away Callay (Cicer arietinum), Jagory, and coco-nuts. At present this trade is at a very low ebb; parties of the Marattah troops seizing on whatever they meet As these are not robbers, but persons regularly employed by government, the custom house is not held answerable for their depredations.

From this it would appear, that the trade of Davana-giri chiefly consists in exchanging the produce of one neighbouring country, for those of another. The only articles of export produced in the neighbourhood are Cumlies, Jagory ( inspissated juice of sugar cane), and Callay (Cicer arietinum).

FRANCIS BUCHANAN- A JOURNEY FROM MADRAS THROUGH THE COUNTRIES OF MYSORE, CANARA AND MALABAR, ASIAN EDUCATIONAL SERVICES NEWDELHI- 1988 VOL I FIRST PUBLICATION 1807,PP.330-333.



## ಚಿಲುಮೆ


ಶ್ರೀಮತಿ ಭಾರತಿ ಚಂದ್ರಶೇಖರ್,
ಜಿಲ್ಲಾ ಗೈಡ್ ಕಮೀಷನರ್,
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್,
ಶಿವಮೊಗ್ಗ.


ಮುಗ್ಧತೆಯ ಮನದವರು
ಅಡುತ್ತ ಹಾಡುತ್ತಾ ಹಾರಾಡುವವರು
ಮಕ್ಕಳು ಭವಿಷ್ಯದ ಬುನಾದಿಗಳು
ನೇರ ನುಡಿಯ ಸುಂದರ ನಡೆಯ ಸ್ಕೌಟ್-ಗೈಡ್‌ಗಳು

ಜಗಕಿದುವೆ ಬೆಳಗಿಸುವ ದೀಪದ ಜ್ಯೋತಿ
ಸ್ನೇಹ, ಪ್ರೀತಿ, ಸಂಯಮಗಳೇ ಬಾಳಿನ ಪ್ರಗತಿ
ಸಂಸ್ಕೃತಿ-ಸೌಜನ್ಯಗಳ ನೆಲೆವೀಡು
ಬೇಡನ್ ಓಲಿವಾರ ಪಾವೆಲ್ಲರು ಸ್ಥಾಪಕರು

ಸ್ನೇಹ-ಸೌಹಾರ್ದಗಳ ಒಡನಾಡಿ
ಪ್ರೀತಿ-ಆದರಗಳ ಸಹಜೋಡಿ
ಮೌಲ್ಯಾಧಾರಿತ ವಿಚಾರ ವಿನಿಮಯ
ಸರಳ ಸಜ್ಜನಿಕೆಯ ಸಂದಾಯ

ಸೇವಾ ಮನೋಭಾವದಲ್ಲ ಪರಿಣಿತರು
ಗಂಟನು ಹಾಕುವ ನಿಷ್ಣಾತರು
ನಂಬಿಕೆಯುಳ್ಳ ಸ್ಕೌಟ್-ಗೈಡ್ಸ್‌ಗಳು
ನಿಷ್ಠಾವಂತ ಚಿಗುರುಗಳು

ಸೋದರ-ಸೋದರಿ ಭಾವದವರು
ಔದಾರ್ಯತೆಯ ಉಸಿರೇ ಇವರು
ಪ್ರಕೃತಿ ಪರಿಸರ ಪ್ರೇಮಿಗಳಿವರು
ಪ್ರಾಣಿ-ಪಕ್ಷಿಗಳ ದಯಾ ಪರರು

ಶಿಸ್ತಿನ ಸೈನ್ಯದ ಸಿಪಾಯಿಗಳಿವರು
ಸಾರ್ವಜನಿಕ ಆಸ್ತಿಯ ರಕ್ಷಕರು
ಸಾಮಾಜಿಕ ಕಳಕಳಿಯುಳ್ಳವರು
ಕರುಣೆಯಲ್ಲಿ ಅತಿರಥರು

ಧೈರ್ಯದಲಿ ಹುಲಿಗಳಿವರು
ಸಾಹಸದಲಿ ಸಿಂಹಗಳಿವರು
ಸಂಘಟನೆಯ ಸಂಘಟಕರು
ದೇಶ, ದೇವರ ಪ್ರೇಮಿಗಳಿವರು

ಭಾವಿ ಶತಮಾನದ ದೀಪಗಳಿವರು
ನಿರಂತರ ಉಜ್ವಲ ಚೈತನ್ಯದವರು
ಭವ್ಯ ಭಾರತದ ಸತ್ಪ್ರಜೆಗಳಿವರು
ನಮ್ಮೆಲ್ಲರ ಆಧಾರ ಸ್ತಂಭಗಳಿವರು
ಇವರೇ ಹೆಮ್ಮೆಯ ಸ್ಕೌಟ್, ಗೈಡ್‌ಗಳು

ಕಾಡಿನ ಹುಲಿಗಳು
ನಾಡಿನ ಕಲಿಗಳು
ಭವಿಷ್ಯದ ಭರವಸೆಗಳು
ಬರಲಿರುವ ಶತಮಾನಕೆ ಸ್ವಾಗತ
ದುಡಿಯೋಣ ನಾವೆಲ್ಲರೂ ಅನವರತ.

ಅನರ್ಹರಿಗೆ ವಿದ್ಯೆ ಹೇಳಿಕೊಡುವವನು ದಡ್ಡ, ಅರ್ಹರಿಗೆ ಹೇಳಿಕೊಡದವನು ಅಪರಾಧಿ - ಅರಬ್ಬೀ ಗಾದೆ.



# ದಾವಣಗೆರೆಯಲ್ಲಿ ಸ್ಕೌಟ್ ಮತ್ತು ಗೈಡ್ ಚಳವಳಿ ಒಂದು ನೋಟ

ಶ್ರೀ ಎ.ಆರ್. ಶಂಕ್ರಯ್ಯ
ನಿವೃತ್ತ ಶಿಕ್ಷಕರು, ಸ್ಕೌಟ್ ಮಾಸ್ಟರ್
ದಾವಣಗೆರೆ

ಸ್ಕೌಟ್ ಚಳವಳಿ ಮೈಸೂರು ಸಂಸ್ಥಾನದಲ್ಲಿ ಬೆಳೆಯುತ್ತಾ ಬಂದು ಅದು ಒಂದು ಸುವ್ಯವಸ್ಥೆಯ ತಳಹದಿಯ ಮೇಲೆ ನಿಂತಾಗ 1928ರಲ್ಲಿ ದಾವಣಗೆರೆಯಲ್ಲಿ ಲೋಕಲ್ ಸ್ಕೌಟ್ ಅಸೋಸಿಯೇಷನ್ ಪ್ರಾರಂಭವಾಯಿತು. ಅದು ಸಾಮಾನ್ಯವಾದ ರೀತಿಯಲ್ಲಿ ತನ್ನ ತಾಲ್ಲೂಕಿನಲ್ಲಿ ಕೆಲಸ ಮಾಡಲಾರಂಭಿಸಿತು. ಇಲ್ಲಿನ ವಿದ್ಯಾವಂತರಿಗೆ ಸಾರ್ವಜನಿಕರಿಗೆ ಸ್ಕೌಟಿಂಗಿನ ಉಪಯೋಗವನ್ನು ಮನವರಿಕೆ ಮಾಡಿಕೊಟ್ಟಿತು. ಮಕ್ಕಳಿಗೆ ಈ ಶಿಕ್ಷಣದಲ್ಲಿರುವ ಜಾತ್ಯತೀತ ಉಪಯೋಗಿ ಗುಣಗಳನ್ನು ಸಾಮಾಜಿಕ ಮೌಲ್ಯಗಳನ್ನು ತಿಳಿಸುತ್ತದೆಯೆಂದು ವಿದ್ಯಾವಂತರೂ ಅಧ್ಯಾಪಕ ವರ್ಗದವರೂ ಮನಗಂಡರು, ದಾವಣಗೆರೆಯಲ್ಲಿ ಯಾವುದೇ ಕಾರ್ಯವಾಗಲಿ ನಿಧಾನವಾಗಿ ಶಕ್ತಿಶಾಲಿಯಾಗಿ ನಡೆಯಬೇಕೇ ಹೊರತು, ಜಿಗುಟಿಲ್ಲದೆ ಧಿಡೀರೆಂದು ಬೆಳೆಯಲಾರವು. ಆಗ ಯುವರಾಜರಾಗಿದ್ದ ಕಂಠೀರವ ನರಸಿಂಹ ರಾಜ ಒಡೆಯರ್‌ರವರು ಮೈಸೂರು ಸ್ಕೌಟ್ಸ್‌ನ ಮುಖ್ಯ ಕಬ್ ಆಗಿದ್ದರು. ಒಂದು ಸಾರಿ ಮಹರಾಜರಾಗಿದ್ದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ದಾವಣಗೆರೆಗೆ ಬಂದಾಗ ಸ್ಕೌಟುಗಳು ಸಾರ್ವಜನಿಕವಾಗಿ ಶಿಸ್ತು ಪರಿಪಾಲನೆಯಲ್ಲಿ ನಿರತರಾಗಿದ್ದುದು ಜನರಿಗೆ ಆಕರ್ಷಣೀಯವಾಗಿತ್ತು.

1936ರಲ್ಲಿ ದಾವಣಗೆರೆಯಲ್ಲಿ ಡಿ.ಇ.ಎ. ಮಾಧ್ಯಮಿಕ ಶಾಲೆ ಎಂಬ ಖಾಸಗೀ ಶಾಲೆ ಪ್ರಾರಂಭವಾಯ್ತು . 1940ರಲ್ಲಿ ಅಲ್ಲಿ ಒಂದು ಸ್ಕೌಟ್ ಟ್ರೂಪ್ ಪ್ರಾರಂಭವಾಯ್ತು . ಎ.ಆರ್.ಶಂಕರಯ್ಯನವರು ಸ್ಕೌಟ್ ಮಾಸ್ಟರ್ ಶಿಕ್ಷಣ ಪಡೆದು ಕಾರ್ಯನಿರ್ವಹಿಸುತ್ತಿದ್ದರು. ಅವರು ಏರ್ಪಡಿಸಿದ್ದ ಬಿ.ಕಲಪನಹಳ್ಳಿ ಕ್ಯಾಂಪಿಗೆ ಜಿಲ್ಲೆಯ ಸ್ಕೌಟ್ ಕಮೀಷನರಾಗಿದ್ದ ಡಬ್ಲ್ಯೂ.ಯು. ಹನುಮಂತರಾಯರು ಬಂದು ಭಾಗವಹಿಸಿದರು. ಸ್ಕೌಟ್‌ಗಳ ಚಟುವಟಿಕೆಯನ್ನು ಕಂಡು ಸಂತೋಷಿಸಿದರು. ಮಾರನೆಯ ದಿನ ಕೆಲ ಅಧ್ಯಾಪಕರನ್ನು ಹಾಗೂ ಸ್ಕೌಟ್ ಶಿಕ್ಷಣ ಪಡೆದಿದ್ದವರನ್ನು ಸೇರಿಸಿ ವಿಚಾರ ವಿನಿಮಯ ಮಾಡಿ ಇಲ್ಲಿನ ಉಪಾಧ್ಯಾಯರಿಗೆ ಮೊದಲು ಸೂಚಿಸಿ ಡಿ.ಇ.ಎ. ಶಾಲೆಯ ಮುಖ್ಯ ಅಧ್ಯಾಪಕರಾಗಿದ್ದ ಜಿ.ಶೇಷಗಿರಿರಾಯರನ್ನು ಒಂದು ಲೋಕಲ್‌ಅಸೋಸಿಯೇಷನ್ ಪ್ರಾರಂಭಿಸಲು ಪ್ರೋತ್ಸಾಹಿಸಿ ಹೋದರು. ಹಿಂದೆ ಇಲ್ಲಿದ್ದ ಲೋಕಲ್ ಅಸೋಸಿಯೇಷನನ್ನು ಪುನರುಜ್ಜೀವನಗೊಳಿಸಲು ಕಾರ್ಯತತ್ಪರರಾದರು. ಹಿಂದಿನ ಲೋಕಲ್ ಅಸೋಸಿಯೇಷನ್ನಿನ ಪದಾಧಿಕಾರಿಗಳಾಗಿದ್ದ ಧರ್ಮರತ್ನಾಕರ ಮದ್ದೂರಾಯಪ್ಪನವರ ಅಧ್ಯಕ್ಷತೆಯಲ್ಲಿ ಸ್ಥಳೀಯ ಸಂಘ ರೂಪುಗೊಂಡಿತು. ಜಿ.ಶೇಷಗಿರಿರಾಯರೇ ಕಾರ್ಯದರ್ಶಿಗಳಾದರು. ಆಗ ಹಿಂದಿನ ಅಸೋಸಿಯೇಷನ್ನಿನ ಹೆಸರಿನಲ್ಲಿ ತಾಲ್ಲೂಕು ಆಫೀಸಿನಲ್ಲಿ ಉಳಿತಾಯ ಖಾತೆಯಲ್ಲಿ ಸ್ವಲ್ಪ ಹಣವಿರಬೇಕೆಂದು ಹೇಳಿದ್ದರಿಂದ ಅದನ್ನು ಹುಡುಕಿಸಲಾಯಿತು. ಹೌದು ಅನೇಕ ದಿನಗಳು ಆ ಹಣ ಅಲ್ಲಿದ್ದು ಬಡ್ಡಿ ಸೇರಿ ಸುಮಾರು 560 ರೂ.ಗಳಾಗಿದ್ದುದು ಕಂಡು ಬಂತು. ಕ್ರಮವರಿತು ಸಂಸ್ಥೆ ಸ್ಥಾಪನೆಯಾಗಿ ಆ ಹಣವನ್ನು ಸಂಸ್ಥೆಗೆ ಕೊಡಲಾಯಿತು. ಇದಕ್ಕೆಲ್ಲ ಧರ್ಮರತ್ನಾಕರ ಮದ್ದೂರಾಯಪ್ಪನವರ ವರ್ಚಸ್ಸೇ ಕಾರಣವಾಗಿತ್ತು.

1940ರ ಸುಮಾರಿಗೆ ಬಿ.ಬೀರಪ್ಪನವರು ಇಲ್ಲಿಗೆ ಸಬ್ ಡಿವಿಜನ್ ಅಧಿಕಾರಿಗಳಾಗಿ ಬಂದರು. ಅದೇ ಸುಮಾರಿನಲ್ಲಿ ಕೃಷ್ಣರಾಯರವರು ಹೊರ ದೇಶದಿಂದ ಶಿಕ್ಷಣ ಪಡೆದು ಬಂದವರು ಸರ್ಕಾರಿ ಹೈಸ್ಕೂಲಿನ ಮುಖ್ಯೋಪಾಧ್ಯಾಯರಾಗಿ ಇದ್ದರು. ಇವರೆಲ್ಲರಿಗೆ ಸ್ಕೌಟಿಂಗಿನ ಬಗೆಗೆ ಒಳ್ಳೆಯ ಅಭಿಪ್ರಾಯವಿತ್ತು . ಡಿ.ಇ.ಎ. ಶಾಲೆಯ ಸ್ಕೌಟುಗಳು ಬಾತಿಯಲ್ಲಿ ಒಂದು ಓವರ್‌ನೈಟ್ ಕ್ಯಾಂಪ್‌ನ್ನು ಏರ್ಪಡಿಸಿದ್ದರು. ಅದೇ ದಿನ ಅಲ್ಲಿಗೆ ಬಂದಿದ್ದ ಬೀರಪ್ಪನವರು 'ಕ್ಯಾಂಪ್ ಫೈಯರ್'ನಲ್ಲಿ ಭಾಗವಹಿಸಿ ಸಂತೋಷ ಪಟ್ಟರು. ತಮ್ಮ ಕಡೆಯಿಂದ ಯಾವ ಸಹಾಯ ಬೇಕೋ ಕೊಡುವೆನೆಂದು ಹೇಳಿ ತಮ್ಮ ಕಛೇರಿಯಲ್ಲಿ ಈಗಿನ ದಾವಣಗೆರೆ ಕ್ಲಬ್ ಮುಂದಿರುವ ಐ.ಬಿ. ಯಲ್ಲಿ ಅವರ ಕಛೇರಿಯಿತ್ತು. ಅಲ್ಲಿಯೇ ಸ್ಥಳವನ್ನು ಕೊಟ್ಟರು ಯಾವಾಗಬೇಕಾದರೂ ತಮ್ಮನ್ನು ಕಾಣಲು ಅನುಮತಿ ನೀಡಿದರು.

ಜಿಲ್ಲಾ ಸಮಿತಿಯನ್ನು ನಿಯಮಿಸಿ ಬೈಲಾಗಳನ್ನು ತಯಾರಿಸಲಾಯಿತು. ಚಿತ್ರದುರ್ಗ ಜಿಲ್ಲಾ ಸಮಿತಿಯ ಆಶ್ರಯದಲ್ಲಿ ಅದು ಕೆಲಸ ಮಾಡಲಾರಂಭಿಸಿತು. ಇದರ ವ್ಯಾಪ್ತಿಗೆ ಹರಿಹರ, ಜಗಳೂರು, ಹೊಳಲ್ಕೆರೆಗಳು ಸೇರಿದವು. ಅವು ದಾವಣಗೆರೆ ಸಬ್ ಡಿವಿಷನ್ನಿನ ವ್ಯಾಪ್ತಿಯಲ್ಲಿದ್ದವು. ಈ ಸಂದರ್ಭದಲ್ಲಿ ಚಿತ್ರದುರ್ಗ ಜಿಲ್ಲಾ ಸ್ಕೌಟ್ ರ್‍ಯಾಲಿ ಚಿತ್ರದುರ್ಗದಲ್ಲಿ ನಡೆಯಿತು. ಸುಮಾರು 60 ಜನ ಸ್ಕೌಟ್‌ಗಳು ಭಾಗವಹಿಸಿ ಮೆಸೇಜ್ ರಿಲೇಯಲ್ಲಿ ಬಹುಮಾನ ಪಡೆದರು. ವಿವಿಧ ಸ್ಪರ್ಧೆಗಳಲ್ಲಿ ಹೆಸರು ಮಾಡಿದರು.

1942ರಲ್ಲಿ ಜಿ.ಶೇಷಗಿರಿರಾಯರು ಲೋಕಲ್ ಅಸೋಸಿಯೇಷನ್ನಿಗೆ ಕಾರ್ಯದರ್ಶಿಗಳಾಗಿ, ದಾವಣಗೆರೆಯಲ್ಲಿ 6 ಟ್ರೂಪ್‌ಗಳು ಪ್ರಾರಂಭವಾದವು. ಸಿಟಿ ರ್‍ಯಾಲಿಯೊಂದು ನಡೆಯಿತು. ಆಗ ಡಿ.ಡಿ.ಪಿ.ಐ. ಆಗಿದ್ದ ಕಸ್ತೂರಿ ರಾಜಶೆಟ್ಟರು ರ್‍ಯಾಲಿಯ ಪ್ರಾರಂಭೋತ್ಸವವನ್ನು ನೆರವೇರಿಸುತ್ತಾ " ವಿದ್ಯಾ ಇಲಾಖೆ ರೆವಿನ್ಯೂ ಇಲಾಖೆ ಸೇರಿದರೆ ಯಾವ ಕೆಲಸವಾಗಲೀ ಚೆನ್ನಾಗಿ ಆಗುತ್ತದೆ'' ಎಂದು ಹೇಳಿದರು. ಸ್ಕೌಟ್ ಕಾರ್ಯಕ್ರಮಗಳಿಂದ ದಾವಣಗೆರೆ ಜನ ಪ್ರಭಾವಿತರಾದರು. 1945ರಲ್ಲಿ ಚಿತ್ರದುರ್ಗ ಜಿಲ್ಲಾ ರ್‍ಯಾಲಿಯು ದಾವಣಗೆರೆ ತಾಲ್ಲೂಕು ಅಸೋಸಿಯೇಷನ್ನಿನ ಆಶ್ರಯದಲ್ಲಿ ದೊಡ್ಡ ಬಾತಿಯಲ್ಲಿ ಬಹಳ ಚೆನ್ನಾಗಿ ನಡೆಯಿತು. ಹಳೇ ಬಾತಿಯ ಮರಗಳ ಮಧ್ಯೆ 2 ದಿನಗಳು ನಡೆದ ಈ ರ್‍ಯಾಲಿಯಲ್ಲಿ 450 ಸ್ಕೌಟುಗಳು ಭಾಗವಹಿಸಿದ್ದರು. ಈಗಲೂ ದಾನಿಗಳಾದ ಧರ್ಮರತ್ನಾಕರ ಮದ್ದೂರಾಯಪ್ಪನವರು ರ್‍ಯಾಲಿ ಸಮಾರಂಭದಲ್ಲಿ ಭಾಗವಹಿಸಿ ಬಹುಮಾನಗಳನ್ನು ಸ್ವಂತ ಖರ್ಚಿನಿಂದ ಕೊಟ್ಟರು.

ಜಗತ್ತಿನಲ್ಲಿ ಎಲ್ಲಾ ಅನಾಹುತಗಳು, ವ್ಯಾಮೋಹದಿಂದಲೇ ಆದುದು – ಸಾಕ್ರೆಟೀಸ್.

ಅಲ್ಲಿಂದ ಒಂದೆರಡು ವರ್ಷದ ನಂತರ ಈಗ ಮುನಿಸಿಪಲ್ ಆಫೀಸಿನಿಂದ ಪೊಲೀಸ್ ಆಫೀಸಿನವರೆಗೆ ಆಗ ಇದ್ದ ಉದ್ಯಾವನದಲ್ಲಿ ಒಂದು ಸಿಟಿ ರ್‍ಯಾಲಿ ನಡೆಯಿತು. 4 ಟ್ರೂಪ್‌ಗಳು ಭಾಗವಹಿಸಿದ್ದವು. ಈಗ ಟ್ಯಾಂಕ್ ಇರುವ ಕಡೆ ಆಗ ಒಂದು ಚೋಪದ ಟ್ಯಾಂಕ್ ಇತ್ತು. ಅದರ ಕೆಳಗಡೆ ಆಯಾ ಟ್ರೂಪ್‌ನವರೇ ಅಡುಗೆ ಮಾಡಿಕೊಂಡರು. 2ನೇ ರಾತ್ರಿ ಒಟ್ಟಿಗೆ ಊಟಕ್ಕೆ ಕುಳಿತಿದ್ದಾಗ ಮಕ್ಕಳ ಕಾರ್ಯಕ್ರಮವನ್ನು ಎರಡೂ ದಿನ ನೋಡಿದ್ದ ಧರ್ಮರತ್ನಾಕರ ಮದ್ದೂರಾಯಪ್ಪನವರು ಸಂತೋಷದಿಂದ ಬೀರಪ್ಪನವರೇ ''ಮಕ್ಕಳು ಇಂತಹ ಕಾರ್ಯಕ್ರಮ ಮಾಡುತ್ತಿರಲಿ ನಾನು ನೋಡಿ ಸಂತೋಷ ಪಡುತ್ತೇನೆ, ಹಾಗೇ ಇತರ ಪೋಷಕರೂ ಕೂಡ '' ಎಂದರು. ಆಗ ಬಿ.ಬೀರಪ್ಪನವರು ''ನೀವು ಶಾಶ್ವತ ಪ್ರೋತ್ಸಾಹ ಕೊಡುವ ಒಂದು ನೆರವು ಕೊಟ್ಟರೆ ನಾವು ನಮ್ಮ ಕರ್ತವ್ಯ ಮಾಡುತ್ತೇವೆ ಎಂದರು. ಅದನ್ನು ಕೇಳಿ ಸಂತೋಷದಿಂದ ಮಾಡುತ್ತೇವೆ ಎಂದರು; ಮದ್ದೂರಾಯಪ್ಪನವರು. ನಮ್ಮ ಸ್ಕೌಟ್ ಚಳವಳಿಗೆ ಕೇಂದ್ರವಾಗುವಂತಹ ಒಂದು ಸ್ಕೌಟ್ ಹಾಲ್ ಕಟ್ಟಿಸಿಕೊಟ್ಟರೆ ನಿಮ್ಮ ನೆನಪು ಸ್ಕೌಟಿಂಗ್‌ನಲ್ಲಿ ಶಾಶ್ವತವಾಗಿರುತ್ತದೆ ಎಂದರು. ನೀವು ಜಾಗಕೊಡಿಸಿ, ನಾನು ಮೂರು ಸಾವಿರ ರೂ. ಕೊಡುತ್ತೇನೆ ಎಂದರು. ಈಗಿನ ಸ್ಕೌಟ್ ಹಾಲ್ ಇರುವ ಜಾಗ ಕೊಡಮಾಡಿದರು. ಅಲ್ಲಿ ಸ್ಕೌಟ್ ಹಾಲ್ ತಯಾರಾಯಿತು. ಅಷ್ಟೇ ಹಣ ಸಾಲದಾದಾಗ ಕೆಲ ದಿನ ಸ್ಕೌಟ್ ಹಾಲ್ ಪ್ಲಾಸ್ಟರ್ ಇಲ್ಲದೆ ನಿಂತಿತ್ತು. ಮತ್ತೊಂದು ದಿನ ಬೀರಪ್ಪನವರನ್ನು ಕಂಡು ಅವರೇ ಕೆಲಸ ಪೂರ್ತಿ ಮಾಡಿಸಲು ಹಣ ಕೊಟ್ಟರು. ಈ ಸಂದರ್ಭದಲ್ಲಿ ಡಾ: ಜಿ.ವಿ.ಶಂಕರಪ್ಪನವರು ಕಮೀಷನರಾಗಿದ್ದರು. 1945ರಲ್ಲಿ ಮಂತ್ರಿಗಳಾಗಿದ್ದ ಎಲ್.ಸಿದ್ದಪ್ಪನವರಿಂದ ಶಂಕುಸ್ಥಾಪನೆ ನೆರವೇರಲ್ಪಟ್ಟಿತು.

ಈ ಸಂದರ್ಭದಲ್ಲಿ ''ರೋಪ್‌ವಿಂಗ್'' ಪ್ರಾರಂಭವಾಗಿ ಸ್ಕೌಟುಗಳೇಕೆ ಒಂದು ಕೋ.ಆಪರೇಟಿವ್ ಸಂಘ ಮಾಡಿ ಜನ ಸೇವೆ ಮಾಡಬಾರದು ಎಂಬ ಯೋಚನೆ ಬಂದು ''ಬಾಲ ಮಂಗಳ ಕೋ.ಆಪರೇಟಿವ್ ಸಂಘ ಪ್ರಾರಂಭವಾಯಿತು. ಈಗಿನ ಕಾಮತ್ ಹೋಟೆಲಿನ ಪಕ್ಕದಲ್ಲಿರುವ ಮಳಿಗೆಗಳ ಜಾಗದಲ್ಲಿ ಶಾಲೆಯಿತ್ತು, ಎದುರಿಗೆ ಬಯಲಿತ್ತು. ಸಂಘ ಪ್ರಾರಂಭವಾಗಿ ಸಾರ್ವಜನಿಕ ಸೇವೆಯಲ್ಲಿ ತೊಡಗಿತು. ಸುಮಾರು ಆರು ವರ್ಷ ಕೆಲಸ ಮಾಡಿದ ಈ ಸಂಘ ಸ್ಕೌಟುಗಳಿಗೆ ಬೇಕಾದ ಸಾಮಾನುಗಳನ್ನು ಮಾರುತ್ತಿತ್ತು.

1946ರಲ್ಲಿ ಡಿ.ಇ.ಎ. ಶಾಲೆಯ ಹತ್ತನೆಯ ವಾರ್ಷಿಕೋತ್ಸವಕ್ಕೆ ಮುಖ್ಯ ಅತಿಥಿಯಾಗಿ ಬಂದಿದ್ದ ಚೀಫ್ ಸ್ಕೌಟ್ ಕಮೀಷನರ್ ಪಿ.ಶಿವಶಂಕರ್‌ರವರು ಇದನ್ನು ಜಿಲ್ಲಾ ಮಟ್ಟಕ್ಕೆ ಏರಿಸಬಹುದು 24 ಗುಂಪುಗಳಿವೆ ಎಂದು ಹೇಳಿದರು. 1949ರಲ್ಲಿ ಇದು 'ದಾವಣಗೆರೆ ಸಿಟಿ ಡಿಸ್ಟ್ರಿಕ್ಟ್' ಆಯಿತು. ಹರಿಹರ, ಬಾತಿ, ಕೊಡತಗುಡ್ಡಗಳಲ್ಲಿ ಸ್ಕೌಟ್ ಟ್ರೇನಿಂಗ್ ಶಿಬಿರಗಳಾದವು. ಅಷ್ಟುಹೊತ್ತಿಗೆ ಭಾರತ್ ಸ್ಕೌಟ್ ಮತ್ತುಗೈಡ್ ಸಂಸ್ಥೆ ಅಸ್ತಿತ್ವಕ್ಕೆ ಬಂದಿತ್ತು. ಬಿ.ಇ.ಓ.ರವರೂ ರೆವಿನ್ಯೂ ಅಧಿಕಾರಿಗಳು ಹೋದಲ್ಲೆಲ್ಲ ಶಾಲೆಗಳಲ್ಲಿ ಸ್ಕೌಟ್ ಗುಂಪುಗಳಾಗಿವೆಯೇ, ಹಣ ಸರಿಯಾಗಿ ಖರ್ಚು ಆಗಿದೆಯೇ ಎಂದು ನೋಡಿ ಪ್ರೋತ್ಸಾಹಿಸಿದರು.

1953ರಲ್ಲಿ ಹೈದರಾಬಾದಿನಲ್ಲಿ ಭಾರತದ ಮೊದಲನೆಯ ಸ್ಕೌಟ್ ರ್‍ಯಾಲಿಯಾಯಿತು. ಅಲ್ಲದೆ ದಾವಣಗೆರೆಯ 29 ಜನ ಸ್ಕೌಟಗಳು ಬಳ್ಳಾರಿ ವಿಭಾಗದೊಡನೆ ಸೇರಿ ಭಾಗವಹಿಸಿದ್ದರು. ಬಳ್ಳಾರಿಯ ಬಾಳಪ್ಪಾಚಾರ್ ವಿಭಾಗದ ಮುಖಂಡ, ದಾವಣಗೆರೆಯಿಂದ ಎಸ್. ನರಸಿಂಹ ಮೂರ್ತಿ ಮತ್ತು ಎ.ಆರ್.ಶಂಕರಯ್ಯನವರು ಮುಖಂಡರಾಗಿ ಹೋಗಿದ್ದರು. ಅಲ್ಲಿ ನಮ್ಮವರು ಬ್ಯಾಂಡ್‌ಸೆಟ್‌ನಲ್ಲಿ ಮೊದಲಿಗರು, ಶಿಸ್ತಿನಲ್ಲಿ ಮೂರನೆಯವರಾಗಿ ಹೆಸರು ಮಾಡಿದರು.

1951ರಲ್ಲಿ ಆಸ್ಟ್ರಿಯದಲ್ಲಿ ಪ್ರಪಂಚದ ಸ್ಕೌಟ್ ಜಾಂಬೋರಿ ನಡೆಯಿತು. ಅದರಲ್ಲಿ ಭಾರತದ ಗುಂಪಿಗೆ ದಾವಣಗೆರೆಯಿಂದ 4 ಜನ ಭಾಗವಹಿಸಿದ್ದರು. ಶ್ರೀಗಳಾದ ಚಿಗಟೇರಿ ಜಯಣ್ಣ, ಕೊಂಡಜ್ಜಿ ಬಸಪ್ಪ, ಡಾ: ಬಿ.ವಿ.ಶಂಕರಪ್ಪ ಶಿವಮೊಗ್ಗಕ್ಕೆ ಹೋಗಿದ್ದರು. ಇವರು ಹೋಗುವ ಮೊದಲು ಡಿ.ಇ.ಎ. ಶಾಲೆಯವರು ಹೊನ್ನೂರಿನಲ್ಲಿ ಏರ್ಪಡಿಸಿದ್ದ ಓವರ್‌ನೈಟ್ ಕ್ಯಾಂಪಿನಲ್ಲಿ ಭಾಗವಹಿಸಿ ಪ್ರತ್ಯಕ್ಷ ಅನುಭವ ಪಡೆದರು. ಡಿ.ಇ.ಎ. ಶಾಲೆಗೆ ಸ್ಕೌಟ್ ಶಾಲೆ ಎಂದು ಹೆಸರನ್ನೇ ಕೊಟ್ಟರು. ಇವರಲ್ಲಿ ಜಿ.ವಿ.ಶಂಕರಪ್ಪನವರು ಭಾರತದ ಗುಂಪಿನ ವೈದ್ಯರಾಗಿಯೂ ಕೊಂಡಜ್ಜಿ ಬಸಪ್ಪನವರು ಲೀಗಲ್ ಅಡ್ವೈಸರ್ ಆಗಿಯೂ ಚಿಗಟೇರಿಯವರು ಪಬ್ಲಿಕ್ ರಿಲೇಷನ್ ಆಫೀಸರ್‌ರಾಗಿಯೂ ಕೆಲಸ ಮಾಡಿದರು. ಇದರಿಂದ ಕೊಂಡಜ್ಜಿಯವರು ಸ್ಟೇಟ್ ಕಮೀಷನರ್‌ರಾಗಲು ಸಾಧ್ಯವಾಯಿತು.

ಜಿಲ್ಲಾ ಕಾರ್ಯದರ್ಶಿಗಳಾಗಿ ಮುನಿಸಿಪಲ್ ಹೈಸ್ಕೂಲಿನ ಆರ್. ಚಂದ್ರಶೇಖರಯ್ಯನವರಿದ್ದಾಗ ದಾವಣಗೆರೆಗೆ ಶ್ರೀ ಜಯಚಾಮರಾಜ ಒಡೆಯರವರು ರಾಜ ಪ್ರಮುಖರಾಗಿ ಬಂದಾಗ ಸ್ಕೌಟ್‌ನವರು ಅವರಿಗೆ ''ಸ್ಟೇವ್ಸ್ ಆಡನ್'' ಕೊಟ್ಟರು. ದೊಣ್ಣೆಗಳಿಂದ ಒಂದು ಗೇಟ್ ಕಟ್ಟಿ ಈಗಿನ ಜಯದೇವ ಸರ್ಕಲ್ಲಿನ ಐ.ಬಿ.ಬಾಗಿಲಕಡೆಯಿಂದ ಸ್ವಾಗತಿಸಿದರು. ಇದು ತುಂಬಾ ಪ್ರಶಂಸೆಗೆ ಒಳಗಾಗಿತ್ತು.

ಈ ಮಧ್ಯೆ ಶ್ರಮದಾನ ಶಿಬಿರಗಳು ಪ್ರಾರಂಭವಾಗಿದ್ದವು. ದಾವಣಗೆರೆಯ 20 ಜನ ಸ್ಕೌಟು 20 ಜನ ರೋವರ್‌ಗಳು, ಬಳ್ಳಾರಿಯ 24 ಜನ ರೋವರುಗಳು, ಸ್ಕೌಟುಗಳು ದಸರಾ ರಜಾ ಕಾಲದಲ್ಲಿ ಶ್ರಮದಾನ ಶಿಬಿರದಲ್ಲಿ ಭಾಗವಹಿಸಿ ಒಂದು ವರ್ಗ ಜಿಗಳಿಯಲ್ಲಿ ಶಾಲಾ ಕಟ್ಟಡ ಕಟ್ಟಿದರು. ಇದಕ್ಕೆ ಸೀತಾರಾಮರಾವ್, ಮುನಿಸಿಪಲ್ ಹೆಸ್ಕೂಲು ಮುಖಂಡರಾಗಿದ್ದರು. ಶಾಮನೂರು, ದೇವರ ಬೆಳಕೆರೆ ಒಂದು ವರ್ಷ, ಇನ್ನೊಂದು ವರ್ಷ ಕುಂಬಳೂರು, ದೇವರಬೆಳಕೆರೆ ರಸ್ತೆಗಳನ್ನು ಮಾಡಿ ಹೊಸಪೇಟೆ, ಶಿವಮೊಗ್ಗ ರಸ್ತೆಯ 26 ಮೈಲಿ ರಸ್ತೆಯಲ್ಲಿ 14 ಮೈಲಿಯ ರಸ್ತೆ ಮಾಡಿಕೊಟ್ಟರು. ಇದಕ್ಕೆ ಶ್ರೀ ಬಾಳಪ್ಪಾಚಾರ್‌ರವರು ಮತ್ತು ದಾವಣಗೆರೆ ಸ್ಕೌಟ್ ಮಾಸ್ಟರ್ ಚಂದಪ್ಪನವರು ಮುಖಂಡರಾಗಿದ್ದರು. ಈ 3 ಶ್ರಮದಾನ ಶಿಬಿರಗಳಿಗೆ ಜಿ.ಶೇಷಗಿರಿರಾವ್ ಮತ್ತು ಜಿ.ಬಾಳಾಜಿರಾವ್ ಇವರು ಸಹಾಯಕರಾಗಿ ಕೆಲಸ ಮಾಡಿದರು. ಬಿದರಿಮಠ್‌ರವರು ಕಾರ್ಯದರ್ಶಿಗಳಾಗಿದ್ದರು.

ಇದಲ್ಲದೆ ದಸರಾ ಕಂಟಿಂಜೆಂಟ್‌ಗೆ ದಾವಣಗೆರೆಯಿಂದ 2 ವರ್ಷ ಜಿ.ಶಂಕರನಾರಾಯಣರಾವ್ ಮತ್ತು ಎ.ಆರ್.ಶಂಕರಯ್ಯನವರ ಮುಂದಾಳತ್ವದಲ್ಲಿ 9 ಮತ್ತು 8 ಜನ ಸ್ಕೌಟುಗಳು ಭಾಗವಹಿಸಿದ್ದರು.

ಶ್ರೀ ಕೆ.ಆರ್.ಸಿದ್ದಪ್ಪನವರು ಕಾರ್ಯದರ್ಶಿಗಳಾದಾಗ ಸಕಲೇಶಪುರದ ಸ್ಕೌಟ್ ರ್‍ಯಾಲಿಗಳಲ್ಲಿ ನಮ್ಮವರು ಭಾಗವಹಿಸಿದ್ದರು.

ಶ್ರೀ ಸ್ವಾಮಿಯವರು ಕಾರ್ಯದರ್ಶಿಗಳಾಗಿ ಹಾಗೂ ಪ್ರೆಸಿಡೆಂಟ್ ಸ್ಕೌಟುಗಳಾಗಿ ಅನೇಕರು ಭಾಗವಹಿಸಿದ್ದರು. ●

ಪ್ರೀತಿ ತಗ್ಗಿರುವ ಸ್ಥಳದಲ್ಲಿ, ಪ್ರತಿಯೊಂದು ಅಪರಾಧವಾಗಿ ತೋರುತ್ತದೆ – ಇಕ್ಬಾಲ್.



# ದೇವಿಸೆಟ್ಟಿಯ ಊರು

ಟಿ.ಗಿರಿಜ
ಲೇಖಕರು, ದಾವಣಗೆರೆ

ದಾವಣಗೆರೆಯ ಪ್ರಾಚೀನ ಇತಿಹಾಸವನ್ನು ಎಲ್ಲಿಂದ, ಹೇಗೆ, ಗಣನೆಗೆ ತೆಗೆದುಕೊಳ್ಳಬೇಕೆನ್ನುವುದುರ ಬಗ್ಗೆ ಒಂದು ಸ್ಪಷ್ಟತೆ ಇರದಿದ್ದರೂ, ಸ್ಥಳೀಯ ಐತಿಹ್ಯದ ಪ್ರಕಾರ ಮತ್ತು ಎಲೆಬೇತೂರಿನ ಶಾಸನಗಳ ಆಧಾರದ ಮೇಲೆ ದಾವಣಗೆರೆಯ ಪ್ರಾಚೀನತೆಯ ಬಗ್ಗೆ ಒಂದು ನಿಲುವಿಗೆ ಬರಬಹುದು.

ಇಂದು ಕರ್ನಾಟಕದ ಕೇಂದ್ರಬಿಂದುವಾಗಿರುವ ದಾವಣಗೆರೆಯ ಹತ್ತಿರ ಭೌಗೋಳಿಕವಾಗಿ ಯಾವುದೇ ಗುಡ್ಡಬೆಟ್ಟಗಳಾಗಲಿ, ನದಿಗಳಾಗಲಿ ಇಲ್ಲ. ಸ್ವಾತಂತ್ರ್ಯನಂತರದಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯ ಸಂದರ್ಭದಲ್ಲಿ ದಾವಣಗೆರೆ ಕರ್ನಾಟಕದ ರಾಜಧಾನಿಯಾಗಲು ಸೂಕ್ತಸ್ಥಳ ಎನ್ನುವ ಹೆಗ್ಗಳಿಕೆಗೆ ಪಾತ್ರವಾಗಿದ್ದಿತಾದರೂ- ಹಿಂದಿನ ಕಾಲದಲ್ಲಿ ದಾವಣಗೆರೆ ಯಾವುದೇ ರಾಜನ ನೇರ ಆಳ್ವಿಕೆಗೆ ಒಳಪಟ್ಟಿರಲಿಲ್ಲವಾದ್ದರಿಂದ, ಇಲ್ಲಿ ಕೋಟೆಕೊತ್ತಳ, ಬುರುಜು, ಬತೇರಿ, ಅರಮನೆಗಳು ಇರಲಿಲ್ಲ. ಬರೀ ಬಯಲೋ ಬಯಲು ಪ್ರದೇಶ.

ಸ್ಥಳೀಯ ಐತಿಹ್ಯದ ಪ್ರಕಾರ ದಾವಣಗೆರೆಗೆ ಹತ್ತಿರದ ಗ್ರಾಮ ಬೇತೂರು ಉಚ್ಛ್ರಾಯ ಸ್ಥಿತಿಯಲಿದ್ದಾಗ, ನಿಟುವಳ್ಳಿ ರಾಜನ ಕುದುರೆಗಳನ್ನು ಕಟ್ಟುವ ಲಾಯ, ಆನೆಗಳನ್ನು ಕಟ್ಟುವ ಸ್ಥಳ. ಆನೆಕೊಂಡ, ದಾವಣಗೆರೆ ರಾಜನ ಪಶು ಮಂದೆಗಳನ್ನು (ದನ ಎತ್ತು ಇತ್ಯಾದಿ) ಕಟ್ಟುವ ರೊಪ್ಪ ಅಥವಾ ದೊಡ್ಡಿಯಾಗಿತ್ತೆಂದು ಹೇಳುತ್ತಾರೆ. ಆದರೆ '' ಯಾವ ರಾಜನ ಕಾಲದಲ್ಲಿ '' ಎಂದು ತಿಳಿದುಬರುವುದಿಲ್ಲ.

ಮೂಲಭೂತ ಪ್ರಶ್ನೆ ಮೊದಲು ಇಲ್ಲಿ 'ದಾವಣಗೆರೆ' ಎನ್ನುವ ಊರು ಇತ್ತೆ ? ಎಂದರೆ , ಇಲ್ಲವೆಂದೇ ಉತ್ತರ ಹೇಳಬಹುದು. ದಾವಣಗೆರೆಗೆ ಹತ್ತಿರದ ಗ್ರಾಮಗಳಾದ ಬೇತೂರು, ಆನೆಕೊಂಡ, ಆವರಗೊಳ್ಳ, ಆವರಗೆರೆ, ಶಾಮನೂರು, ಹರಿಹರ ಇತ್ಯಾದಿ ಊರುಗಳು ಅಸ್ತಿತ್ವದಲ್ಲಿದ್ದಾಗ, ದಾವಣಗೆರೆ ಅಸ್ತಿತ್ವದಲ್ಲಿ ಇರಲೇ ಇಲ್ಲವೆಂದು ಹೇಳಬಹುದು.

ಬಹುಶಃ ದಾವಣಗೆರೆ ಎನ್ನುವ ಈ ಊರು ಸುಮಾರು ಒಂದು ಸಾವಿರ ವರ್ಷಗಳ ಹಿಂದೆ ಅಸ್ತಿತ್ವಕ್ಕೆ ಬಂದಿರಬಹುದು... ಬಂದಿದ್ದರೂ ಒಂದು ಸಣ್ಣ ಅಜ್ಞಾತ ಹಳ್ಳಿಯಾಗಿ.

ದಾವಣಗೆರೆಗ 'ದಾವಣಗೆರೆ' ಎನ್ನುವ ಹೆಸರು ಹೇಗೆ ಬಂತು ? ಎನ್ನುವುದಾದರೆ ಸ್ಥಳನಾಮದ ನಿಷ್ಪತ್ತಿಯನ್ನು ಹೀಗೆ ಅರ್ಥೈಸಿದ್ದಾರೆ. ದಾವ - ಅಡವಿ.. ಕಾಡು, ಕೆರೆ- ಇಂದಿನ ಜಾಲಿನಗರದ ದೊಡ್ಡಕೆರೆ ಇದ್ದ ಪ್ರದೇಶ. (ಈಗ ಸುಮಾರು 50 ವರ್ಷಗಳ ಹಿಂದೆ ಇಲ್ಲಿ ಕೆರೆ ಇತ್ತು ) ಕೆರೆ ಇದ್ದುದರಿಂದ ಸೊಂಪಾಗಿ ಹಸಿರು ಹುಲ್ಲುಗಾವಲು, ಗಿಡಗಂಟೆಗಳು, ಜಾಲಿ ಪೆಳೆ ವಿಶೇಷವಾಗಿ ಬೆಳೆದಿದ್ದವು. ಮತ್ತು ಕೆರೆಗೆ ಹತ್ತಿರದಲ್ಲಿ ಈಶ್ವರಲಿಂಗವೊಂದಿತ್ತು. ದೇವರು, ಕೆರೆ, ಸೊಂಪಾದ ಹಸಿರು ಹುಲ್ಲುಗಾವಲು ಇದ್ದ ಸ್ಥಳ.

ಆಗ ಈ ಭಾಗದಲ್ಲಿ ಪ್ರಯಾಣಿಸುತ್ತಿದ್ದ ಪ್ರಯಾಣಿಕರು, ವ್ಯಾಪಾರಿಗಳು, ದಂಡಿನವರು, ದನಗಾಹಿಗಳು.... ತಮ್ಮ ಎತ್ತು, ಕುದುರೆ ಮುಂತಾದವುಗಳನ್ನು ಒಂದೇ ಹಗ್ಗದಲ್ಲಿ ವಿಶಿಷ್ಟವಾಗಿ 'ದವಣೆಕಟ್ಟು' ಬಿಗಿದು ಕಟ್ಟಿ ವಿಶ್ರಾಂತಿ ಪಡೆದು ಮುಂದೆ ಸಾಗುತ್ತಿದ್ದರಂತೆ. (ದವಣಿ - ಗುಂಪು, ದಾವಣಿ - ಹಗ್ಗ, ಕಣ್ಣಿ ) ಹೀಗೆ ದನ, ಎತ್ತು , ಕುದುರೆಗಳನ್ನು ಕಟ್ಟುವ ಸ್ಥಳದಲ್ಲೇ ಕೆರೆ ಇದ್ದುದರಿಂದ ದವಣಿಕೆರೆ - ದಾವಣಗೆರೆಯಾಗಿದೆ.

ಈ ಕೆರೆಗೆ ಹತ್ತಿರದಲ್ಲೇ ಶಿಭಾರ. ಈ ಶಿಭಾರ ದಾಟಿದರೆ (ಕೊಂಡಜ್ಜಿ ರಸ್ತೆಯಲ್ಲಿ ) ಮೈಲಾರ ಲಿಂಗೇಶ್ವರ. ಕೆರೆಯ ಬಲಗಡೆ ಚಂದ್ರಮೌಳೇಶ್ವರ. ಈಚೆ, ದುರ್ಗಾಂಬಿಕ ದೇವಾಲಯದ ಬಳಿಯೆ ಈಶ್ವರಲಿಂಗ (ತ್ರಿಭುವನೇಶ್ವರ ಲಿಂಗ). ಈ ಕೆರೆಯ ಸುತ್ತ ದೇವರುಗಳು ನೆಲೆಸಿದ ಸ್ಥಳ. ದೇವನಕೆರೆ, ಮುಂದೆ ದೇವನಗೆರೆ, ದ್ಯಾವನಕೆರೆ, ದ್ಯಾವನಗೆರೆ, ದಾವನಗೆರೆ, ದೇವಣಗೆರೆ - ದ್ಯಾವಣಗೆರೆ - ದ್ಯಾವಣಗೆರೆ - ''ದಾವಣಗೆರೆ'' ಎಂದು ಸ್ಪಷ್ಟ, ಗಟ್ಟಿ , ಶುದ್ಧ ಹೆಸರನ್ನು ಪಡೆಯಿತು. ಈ ಪ್ರದೇಶದಲ್ಲಿ ಜನವಸತಿಯಾಗಿ ಕುಗ್ರಾಮ ಒಂದು ಆರಂಭವಾಗಿರಬೇಕು.

ಒಂದು ಸಾವಿರ ವರ್ಷಗಳ ಹಿಂದೆ ಈ ಊರು ಅಸ್ತಿತ್ವಕ್ಕೆ ಬಂದಿರಬಹುದು ಎಂದು ಹೇಳಲು - ಬೇತೂರಿನ ವರ್ತಕ 'ದೇವಿಸೆಟ್ಟಿ' ಎನ್ನುವ ಶಿವಭಕ್ತ ತ್ರಿಭುವನೇಶ್ವರ ದೇವರಿಗೆ ದಾನ ನೀಡಿದ ಹೊಲಗಳ ಸ್ಥಳವೇ ದಾವಣಗೆರೆ ಊರು ಬೆಳೆಯಲು ಸಾಧ್ಯವಾಗಿದೆ, ಎಂದು ತಿಳಿಯಬಹುದಾಗಿದೆ. ಬೇತೂರು ರಾಜಧಾನಿಯಾಗಿದ್ದಾಗ ಅಥವಾ ಪ್ರಮುಖ ಸ್ಥಳವಾಗಿದ್ದಾಗ ಈ ದೇವಿಸೆಟ್ಟಿ ಪ್ರಮುಖನಾಗಿರಬೇಕು ಮತ್ತು ಒಂದು ವಿಶೇಷವೆಂದರೆ ಕನ್ನಡ ಎನ್ನುವ ಶಬ್ದ ಆನೆಕೊಂಡದ ಒಂದು ಶಾಸನದಲ್ಲಿ ಪ್ರಯೋಗವಾಗಿದೆ.

1, ಸ್ವಸ್ತಿ ಸಮಸ್ತ ಪ್ರಶಸ್ತಿ ಸಕಲ ಗುಣ ಸಂಪನ್ನರಪ್ಪ
ಕನ್ನಡ ನಾಲ್ಕು ಸಾಸಿರದ ದಂಡಂಗಳಿಗೆ ಮುಖರಪ್ಪ
ಶೈವರ ದೇವಿಸೆಟ್ಟಿಯವರು.....

ಮತ್ತು 11-12ನೇ ಶತಮಾನದ ವೇಳೆಗೆ ಕುಗ್ರಾಮ, ಸಣ್ಣ ಹಳ್ಳಿಯಾಗಿದ್ದ ದಾವಣಗೆರೆ ಒಂದು ಸಾಧಾರಣ ಮಟ್ಟಿನ ಊರಾಗಿ ಬೆಳೆಯುವುದರ ಜೊತೆಗೆ ಒಂದು ''ಸೀಮೆ''ಯಾಗಿತ್ತು ಎನ್ನಲು -

ತುಂಬಿನ ಹಳ್ಳಿಯ ಹೊಲದೊಳಗೆ
ದಾವಣಗೆರ್ಯ ಸೀಮೆಯಂ.....

ಎಂದು ಕ್ರಿ.ಶ. 1121ರ ಕಾಲದ ದಾವಣಗೆರೆಯ 3ನೇ ಶಾಸನದಲ್ಲಿ ಪ್ರಪ್ರಥಮವಾಗಿ ದಾವಣಗೆರೆಯ ಹೆಸರು ಉಲ್ಲೇಖಗೊಂಡಿದೆ. ''ಸೀಮೆ'' ಎಂದರೆ ಅನೇಕ ಹಳ್ಳಿಗಳನ್ನು ಒಳಗೊಂಡ ಊರು ಎಂದು

ತಿಳಿಯಬಹುದಾಗಿದೆ.

ದಾವಣಗೆರೆಯ ನಿವಾಸಿಗಳ ಬಗ್ಗೆ ಹೇಳಬೇಕೆಂದರೆ - ಊರು ಪ್ರಾರಂಭವಾದ ಸಂದರ್ಭದಲ್ಲಿ ನಿವಾಸಿಗಳು ಯಾರಿದ್ದರೊ ? ಆದರೆ, ದಾವಣಗೆರೆಗೆ ಹತ್ತಿರದ, ಸುತ್ತಮುತ್ತಲಿನ ಗ್ರಾಮಗಳಾದ, ಶಾಮನೂರು, ರಾಜನಹಳ್ಳಿ , ಚನ್ನಗಿರಿ, ಮಾಗನೂರು, ಚಿಗಟೇರಿ, ಬೇತೂರು ಇತ್ಯಾದಿ ಗ್ರಾಮಗಳಿಂದ ಬಂದು ನೆಲಸಿದ್ದು ಆ ಮನೆತನಗಳೇ ಇಲ್ಲಿಯ ಮೂಲ ನಿವಾಸಿಗಳಾಗಿದ್ದಾರೆ. ಒಟ್ಟಾರೆ ಹೊರಗಡೆಯಿಂದ ವಲಸೆ ಬಂದ ಜನರಿಂದಲೇ ದಾವಣಗೆರೆ ಬೆಳೆದಿದೆ.

ಹೊರಗಿನವರೇ ಇಲ್ಲಿ ಬಂದು ನೆಲೆಸಲು, ಈ ವಿಭಾಗದಲ್ಲಿ ಬಯಲು ಪ್ರದೇಶ, ನೀರು, ಹಸಿರಿನಿಂದ ಆರಾಮವಾಗಿತ್ತು . ಹೀಗೆ ಪ್ರಯಾಣಿಸುವವರೂ ಬಹುಶಃ ವರ್ತಕರಿರಬೇಕು. ದಾವಣಗೆರೆಯ 2ನೇ ಶಾಸನದಲ್ಲಿ(ಕ್ರಿ.ಶ. 1124 ಕಾಲದಲ್ಲಿ) ''ವಣಿಗರ ದೇವನಗರಿಯಂ'' ಎಂದು ಉಲ್ಲೇಖಿಸಿದೆ.

ಅಂದಿನ ದಾವಣಗೆರೆಯ ಜನ ಅಥವಾ ವಣಿಗರು (ವರ್ತಕರು) ಈ ದೇವನಗರದಲ್ಲಿ ತಮ್ಮ ದಾನದತ್ತಿ , ಧರ್ಮ , ಮುಂತಾದವುಗಳಿಂದ ಹೆಸರಾಗಿದ್ದರು.

ಧರ್ಮದ ಮೇರು....ಧರ್ಮದ ತವರ್ಮನೆ, ಧರ್ಮದ ಜನ್ಮಭೂಮಿ,

...ಛಲದಂಕ ರಾಯನಭಯಂ...ರತ್ನಾಕರಂ....

ಎಂದು ಉಲ್ಲೇಖಿಸಿದೆ. ಹಿಡಿದ ಕೆಲಸವನ್ನು ಸಾಧಿಸುವ ಛಲದಂಕ, ಧರ್ಮರತ್ನಾಕರರು ಇಲ್ಲಿದ್ದರು. ಎಂದು 11-12 ನೇ ಶತಮಾನದಿಂದಲೇ ಹೆಸರಾಗಿದೆ.

ಹಿಂದೆ ಈ ಪ್ರದೇಶ, ಮೌರ್ಯರು, ಶಾತವಾಹನರು, ಕದಂಬರು, ಚಾಲುಕ್ಯರು, ರಾಷ್ಟ್ರಕೂಟರು, ನೊಳಂಬರು, ಹೊಯ್ಸಳರು, ಮಹಮದೀಯರು, ವಿಜಯನಗರದರಸರು, ಪಾಳೆಯಗಾರರು, ಮೈಸೂರು ಒಡೆಯರು, ಹೈದರ್, ಟಿಪ್ಪು , ಮರಾಠೆಯವರು, ಬ್ರಿಟಿಷರು ಇಲ್ಲಿ ಅಪರೋಕ್ಷವಾಗಿ ಆಳ್ವಿಕೆ ನಡೆಸಿದ್ದಾರೆ.

ದಾವಣಗೆರೆ ಹತ್ತಿರದ ಅಸಗೋಡು, ಶಾಮನೂರು ಗ್ರಾಮಗಳು ಕ್ರಿ.ಪೂ. 3ನೇ ಶತಮಾನದಲ್ಲೇ ಮೌರ್ಯರಿಗೆ ಸೇರಿದ್ದರಿಂದ ಮೌರ್ಯರಿಗೂ, ಭೀಮ ಮತ್ತು ವೇದಾವತಿ ನದಿಗಳ ಮಧ್ಯದ ಪ್ರದೇಶ ಕುಂತಳದೇಶವೆನ್ನಿಸಿದ್ದರಿಂದ ಶಾತವಾಹನರಿಗೂ ಈ ಪ್ರದೇಶ ಒಳಪಟ್ಟಿತ್ತು.

ಅಣಜಿಯ ಶಿವನಂದನ ವರ್ಮ, ಕಾಶಿಪುರದ ಶಾಸನಗಳಿಂದ 3-6ನೇ ಶತಮಾನದವರೆಗೆ ಬನವಾಸಿಯ ಕದಂಬರಿಗೆ (ಕದಂಬದೇಶ ಸಹಸ್ರಾಂತರ್ಗತ ಬೆಳ್ಳೂರು ದ್ವಾದಶ ಮಧ್ಯೆ) ಸೇರಿತ್ತು. 6ನೇ ಶತಮಾನದ ನಂತರ ಬಾದಾಮಿ, ಕಲ್ಯಾಣಿ ಚಾಲುಕ್ಯರಿಗೂ, ದಾವಣಗೆರೆಗೆ ಹತ್ತಿರದ ಹದಡಿ ಶಾಸನದಿಂದ ಚಾಲುಕ್ಯರ ಜಯಸಿಂಹನ ಮಗ ಸೋಮೇಶ್ವರ ಅಥವಾ ತ್ರೈಲೋಕ್ಯ ಮಲ್ಲನು ಕದಂಬಳಿಗೆ- 1000 ಆಳುತ್ತಿದ್ದುದರಿಂದ ದಾವಣಗೆರೆ ಕದಂಬಳಿಗೆ - 1000 ದಲ್ಲಿ ಒಂದಾಗಿತ್ತು . ( ಈ ಶಾಸನದ ಕಾಲ ಕ್ರಿ.ಶ.1042) ಕ್ರಿ.ಶ. 700-1050ರ ವರೆಗೆ ಚಾಲುಕ್ಯರ ಸಾಮಂತರಾದ ನೊಳಂಬರು 1073-1183ರ ವರೆಗೂ ಆಳುತ್ತಿದ್ದುದರಿಂದ ದಾವಣಗೆರೆ ಪ್ರದೇಶ ನೊಳಂಬವಾಡಿಯ 3200ದಲ್ಲಿ ಒಂದಾಗಿತ್ತು. ದುರ್ಗಾಂಬಿಕಾ ದೇವಾಲಯ ಬಳಿಯ ಶಾಸನದಿಂದ 1060ರಲ್ಲಿ ರಾವಪಾಂಡ್ಯನಿಗೆ ಸೇರಿತ್ತೆಂದು ತಿಳಿದು ಬರುತ್ತದೆ.

ಕಲ್ಯಾಣಿ ಚಾಲುಕ್ಯರ ವಿಕ್ರಮಾದಿತ್ಯನ ಕಾಲದಲ್ಲಿ ತ್ರಿಭುವನ ಮಲ್ಲಪಾಂಡ್ಯ ಈ ನೊಳಂಬವಾಡಿಯ ಮಹಾಮಂಡಲೇಶ್ವರರಾಗಿ ಬೇತೂರು ಮತ್ತು ಉಚ್ಚಂಗಿ ದುರ್ಗದಿಂದ ಆಳುತ್ತಿದ್ದಾಗ ದಾವಣಗೆರೆ 'ಪಾಂಡ್ಯ ಮಂಡಲ'ದ ಒಂದು ಭಾಗವಾಗಿತ್ತು. 1073ರಲ್ಲಿ ನೊಳಂಬಪಲ್ಲವ ಆಳ್ವಿಕೆಗೆ ಒಳಪಟ್ಟಿತ್ತು.

6-8ನೇ ಶತಮಾನದ ನಂತರ ರಾಷ್ಟ್ರಕೂಟರಿಗೂ ಸೇರಿತ್ತು. ಕ್ರಿ.ಶ. 1280ರಲ್ಲಿ ದೇವಗಿರಿಯ ಯಾದವರು ಅಥವಾ ಸೇವುಣರು ಬೇತೂರಿನಲ್ಲಿ ಪ್ರಾಂತೀಯ ಸರ್ಕಾರ ರಚಿಸಿದಾಗ ದಾವಣಗೆರೆ ಇವರ ಆಳ್ವಿಕೆಗೂ ಒಳಪಟ್ಟಿತ್ತು.

11-14ನೇ ಶತಮಾನದವರೆಗೂ ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತು. ಎಂದು ಸಮರ್ಥಿಸಲು ದಾವಣಗೆರೆಗೆ ಹತ್ತಿರದ ಗ್ರಾಮಗಳ (ಆನೆಕೊಂಡ) ದೇವಾಲಯಗಳನ್ನು ಗಮನಿಸಬಹುದು. ಕ್ರಿ.ಶ. 1310ರಲ್ಲಿ ಮಹಮದೀಯರಿಗೂ, 1342ರಿಂದ ವಿಜಯ ನಗರದರಸರಿಗೂ (ಆಗ ವಿಜಯನಗರ ಸಾಮ್ರಾಜ್ಯದ ಕೊಟ್ಟೂರು ಚಾವಡಿಗೆ ದಾವಣಗೆರೆ ಒಳಪಟ್ಟಿತ್ತು). ಕ್ರಿ.ಶ.1562ರಲ್ಲಿ ವಿಜಯನಗರ ಸಾಮ್ರಾಜ್ಯ ಪತನಗೊಂಡಾಗ ಚಿತ್ರದುರ್ಗದ ಪಾಳೆಯಗಾರರಿಗೆ ಸುಮಾರು 211 ವರ್ಷಗಳ ಕಾಲ ಸೇರಿತ್ತು. ಈ ಮಧ್ಯೆ 1747-48ರಲ್ಲಿ ಬಿದನೂರಿನವರಿಗೂ, ಕೆಲದಿನ ಸವಣೂರು ನವಾಬರಿಗೂ ಸೇರಿತ್ತು.

ಚಿತ್ರದುರ್ಗ ವೀರಮದಕರಿನಾಯ್ಕನ ಕಾಲದಲ್ಲಿ ಚಿತ್ರದುರ್ಗದ ಪಾಳೆಯಪಟ್ಟು ಪತನಗೊಂಡಾಗ ಹೈದರಾಲಿಗೆ ಸೇರಿತು. ಇವನು ತನ್ನ ಒಬ್ಬ ಸರದಾರನಾದ ಅಪ್ಪೋಜಿರಾಯನಿಗೆ ''ದಾವಣಗೆರೆಯನ್ನು ಜಹಗೀರಿ''ಯಾಗಿ ನೀಡಿದ. (ಇದುವರೆಗೂ ಈ ಅಪ್ಪೋಜಿರಾಯ ಮರಾಠಿ ಸರದಾರ ಎಂದೇ ಉಲ್ಲೇಖಿಸಿದೆ. ಆದರೆ ಇತ್ತೀಚೆಗೆ ಡಾ|| ಸೂರ್ಯನಾಥ ಕಾಮತ್‌ರು ಈ ಸರದಾರ ಗೌಡಸಾರಸ್ವತ ಬ್ರಾಹ್ಮಣ, ಅಂಕೋಲದವನು ಎಂದಿದ್ದಾರೆ. ಆದರೆ ಅಪ್ಪೋಜಿರಾಯನ ಸಂದರ್ಭವನ್ನು ಒರೆಗೆ ಹಚ್ಚಿದರೆ, ಇವನು ಮರಾಠಿ ಸರದಾರನೇ ಇರಬೇಕೆನಿಸುತ್ತದೆ. ಈತ , ದಾವಣಗೆರೆಯನ್ನು ಅಭಿವೃದ್ಧಿಗೊಳಿಸಲು ತುಂಬಾ ಶ್ರಮವಹಿಸಿದ. ಹೊರಗಿನಿಂದ ಅನೇಕ ವ್ಯಾಪಾರಸ್ಥರನ್ನು ಇಲ್ಲಿ ನೆಲೆಸುವಂತೆ ಮಾಡಿದ. ಈತನಿಗೆ ಸಂತಾನವಿಲ್ಲದಿದ್ದರಿಂದ ಟಿಪ್ಪೂ ಜಹಗೀರಿಯನ್ನು ವಾಪಸ್ಸು ಪಡೆದು ತನ್ನ ಅಧಿಕಾರಿಗಳನ್ನು ನೇಮಿಸಿದ. ಕ್ರಿ.ಶ. 1790-92ರಲ್ಲಿ ಟಿಪ್ಪು ಬ್ರಿಟಿಷರಿಗೆ ಸೋತಾಗ - ತುಂಗಭದ್ರಾ ನದಿಯ ಉತ್ತರಭಾಗವನ್ನು ಮರಾಠಿಗರಿಗೆ ಮಾರಿದ.

ಹರಿಹರ-ದಾವಣಗೆರೆಗಳು ಮೈಸೂರು ರಾಜ್ಯದ ಗಡಿ ಪ್ರದೇಶಗಳಾಗಿದ್ದವು. ಕ್ರಿ.ಶ. 1799ರಲ್ಲಿ ಬ್ಯಾರಿಕ್ಲೋಸ್ ಎನ್ನುವ ಬ್ರಿಟಿಷ್ ಅಧಿಕಾರಿ ಹರಿಹರದಲ್ಲಿ ಸೈನಿಕ ಠಾಣೆ ಸ್ಥಾಪಿಸಿದ. ಹರಿಹರ ಠಾಣೆ ವ್ಯಾಪ್ತಿಯೊಳಗೇ ಬರುತ್ತಿತ್ತು. ಕ್ರಿ.ಶ. 1748ರಲ್ಲಿ ಹರಪನಹಳ್ಳಿ ಸೋಮಶೇಖರ ರಾಯನಿಗೂ, ಚಿತ್ರದುರ್ಗದ ಹಿರೇ ಮದಕರಿ ನಾಯ್ಕನಿಗೂ ಮಾಯಕೊಂಡದಲ್ಲಿ ಲಡಾಯಿ ನಡೆದಾಗ - ದಾವಣಗೆರೆಗೂ ಈ

ಅಲ್ಲಾಹನು ಸತ್ಕರ್ಮಿಗಳನ್ನು ಪ್ರೀತಿಸುತ್ತಾನೆ - ಖುರಾನ.

ಲಡಾಯಿಯ ಬಿಸಿತಟ್ಟಿರಬೇಕು. ಹೀಗೆ ದಾವಣಗೆರೆ ಪರೋಕ್ಷವಾಗಿ ಅಲ್ಲದಿದ್ದರೂ - ಅಪರೋಕ್ಷವಾಗಿ ಎಲ್ಲರ ಆಳ್ವಿಕೆಗೆ ಒಳಪಟ್ಟ ಊರಾಗಿತ್ತು.

ಮೂರು ಸ್ಪಷ್ಟನೆಗಳು :

1) ಶ್ರೀ ಬಿ.ರಾಜಶೇಖರಪ್ಪನವರು - ದಾವಣಗೆರೆ ಊರು ಪ್ರಾರಂಭವಾದ ಬಗ್ಗೆ ಹೀಗೆ ಹೇಳಿದ್ದಾರೆ. ದಾವಣಗೆರೆ ಸ್ಥಳನಾಮ ನಿಷ್ಪತ್ತಿಯ ಬಗ್ಗೆ - ದಾವಣಗೆರೆ ಸ್ಥಳನಾಮದ ಪ್ರಾಚೀನ ರೂಪ - ''ದಾವಣಗೆರೆ'' ಒಬ್ಬ ವ್ಯಕ್ತಿನಾಮವಾಗಿರುವುದು ಸ್ಪಷ್ಟ. ಯಾರಾದರೂ ದಂಡಾಧೀಶ ದಂಡನಾಯಕ ಈ ಊರು ಕಟ್ಟಿರಬೇಕು. ಆದರೆ ಈ ದಾವಣ ಯಾರು? ಯಾವ ಕಾಲದಲ್ಲಿದ್ದ? ಅವನ ಪಾತ್ರವೇನು? - ಎನ್ನುವುದರ ಬಗ್ಗೆ ಉತ್ತರ ಇಲ್ಲ ಎಂದಿದ್ದಾರೆ. ಇದರಿಂದ ಸೂಕ್ತ ಸಂಶೋಧನೆ ನಡೆದು ಉತ್ತರ ಸಿಗುವವರೆಗೂ - ಇದುವರೆಗೂ ಇರುವ ಸ್ಥಳೀಯ ಇತಿಹಾಸಗಳನ್ನೇ ಆಧಾರವಾಗಿಟ್ಟುಕೊಂಡರೆ ತಪ್ಪಿಲ್ಲ - ಎನ್ನುವುದು ನನ್ನ ಅಭಿಪ್ರಾಯ.

2) ಒಂದು ಸಂದರ್ಭದಲ್ಲಿ ಶ್ರೀ ಟಿ.ಎಸ್. ಗಂಡುಗಲಿಯವರು - ದಾವಣಗೆರೆ ಹಿಂದೆ ದ್ಯಾಮವ್ವನಹಳ್ಳಿಯಾಗಿತ್ತು ಎಂದು ಹೇಳಿಕೆ ನೀಡಿದ್ದರು. ಆದರೆ ಶ್ರೀಯುತರ ಹೇಳಿಕೆಯನ್ನು ಯಾವ ಕಾರಣಕ್ಕೂ ಒಪ್ಪಲಾಗುವುದಿಲ್ಲ. ಕಾರಣ - ದಾವಣಗೆರೆ ತಾಲ್ಲೂಕಿನಲ್ಲಿ ಮೂರು ದ್ಯಾಮೇನಹಳ್ಳಿಗಳಿವೆ. ಕುರುಡಿ ಬೇತೂರು ದ್ಯಾಮೆನಹಳ್ಳಿ, ಅಕ್ಕಸಾಲಿ ದ್ಯಾಮಜ್ಜಿಹಳ್ಳಿ, ಇನಾಂದಾರಿ ದ್ಯಾಮೆನಹಳ್ಳಿ ಇವು ಯಾವುವೂ ದಾವಣಗೆರೆ ಹತ್ತಿರದಲ್ಲಿ ಇಲ್ಲ ಮತ್ತು ದಾವಣಗೆರೆಯಲ್ಲಿ ಇರುವ ನಗರದೇವತೆ ದುರ್ಗಾಂಬಿಕೆ (ದುಗ್ಗಮ್ಮ). ಒಂದೇ ಒಂದು ದ್ಯಾಮವ್ವನ ಗುಡಿಗಳೂ ಇಲ್ಲ. ಅಂದಾಗ ದಾವಣಗೆರೆ ಹೇಗೆ ದ್ಯಾಮೇನಹಳ್ಳಿಯಾಗುತ್ತದೆ! ಹೀಗೆ... ದಾವಣಗೆರೆ ತನ್ನ ಹುಟ್ಟಿನ ಬಗ್ಗೆ - ಅನೇಕ ಸಮಸ್ಯೆಗಳನ್ನು ಕಾಣುತ್ತಾ, ಪರಿಹಾರಕ್ಕಾಗಿ- ಸಂಶೋಧನೆಗೆ ಒಳಗಾಗಲು ಸಿದ್ದವಾಗಿದೆ.

3) 11-4-1801ರಲ್ಲಿ ಫ್ರಾನ್ಸಿಸ್ ಬುಕನನ್ - ವಿದೇಶಿ ಪ್ರವಾಸಿ - ಈ ಭಾಗದಲ್ಲಿ ಪ್ರವಾಸ ಮಾಡಿದಾಗ, ನಮ್ಮ ದಾವಣಗೆರೆಗೂ ಭೇಟಿ ನೀಡಿ, ದಾವಣಗೆರೆ ಹೇಗಿತ್ತೆಂದು ಉಲ್ಲೇಖಿಸಿದ್ದಾನೆ. ''ದಾವಣಗೆರೆ ಅತಿ ಸಣ್ಣ, ಸಾಧಾರಣ ಅಜ್ಞಾತ ಹಳ್ಳಿಯಾಗಿತ್ತು. ಸುಮಾರು 500 ಮನೆಗಳ ಗ್ರಾಮವಾಗಿದ್ದು ಒಂದೇ ಬಜಾರಿನಿಂದ ಕೂಡಿತ್ತು. ಹೊಸ ಕಟ್ಟಡಗಳಾವುವೂ ಇರಲಿಲ್ಲ. ಊರಸುತ್ತ ಸಣ್ಣ ಮಣ್ಣಿನ ಕೋಟೆಯಿತ್ತು. ವ್ಯವಸಾಯ ಮುಖ್ಯ ಕಸುಬು. ಕಂಬಳಿ ನೇಯ್ಗೆ ಕೆಲಸವನ್ನು ಮನೆಯಲ್ಲೇ ನಡೆಸುತ್ತಿದ್ದರು'' ಎಂದಿದ್ದಾನೆ.

ಅಂದು ಊರಿನ ಸುತ್ತ ಮಣ್ಣಿನ ಗೋಡೆ ಇತ್ತು. ದುಗ್ಗಮ್ಮನ ಗುಡಿಯ ಸುತ್ತಲಿನ ಪ್ರದೇಶಕ್ಕೆ ಈಗಲೂ ''ಕ್ವಾಟೆ'' ಎನ್ನುತ್ತಾರೆ. ಈಶ್ವರ ದೇವಾಲಯದ ಎದುರಿಗೆ ಒಂದು ಕೋಟೆ ಬುರುಜು ಇತ್ತು. ಕೋಟೆಗೆ ಹೊಂದಿಕೊಂಡಂತೆ, ದಿಡ್ಡಿ ಬಾಗಿಲಿತ್ತು. ಈ ದಿಡ್ಡಿ ಬಾಗಿಲಿನ ಮೂಲಕವೇ ಜನ ಕೆರೆ ಹಾಗೂ ಹೊಂಡಗಳಿಂದ ನೀರು ತರುತ್ತಿದ್ದರು.

ದುರ್ಗಾಂಬಿಕಾ ದೇವಾಲಯದ ಸುತ್ತಲಿನ ಪ್ರದೇಶದಲ್ಲೇ ದಾವಣಗೆರೆ ಪ್ರಾರಂಭವಾಗಿತ್ತು. ಹಗೆದಿಬ್ಬ ಸರ್ಕಲ್ಲೇ ಆಗಿನ ಊರಿನ ಪ್ರಮುಖ ಹೆಬ್ಬಾಗಿಲು. ಈಗಿನ ದುಗ್ಗಮ್ಮನ ಗುಡಿಯ ಬಳಿಯ ಹಳೇಪೇಟೆಯೇ - ಆಗಿನ ದೊಡ್ಡ ಬೀದಿ. ಈ ಹಳೇಪೇಟೆಯಿಂದ ಒಳಗೆ ಹೋದರೆ ದೊಡ್ಡ ಹೊಂಡವಿದೆ. ಅದೇ ಅಮ್ಮನ ಬಾವಿ. ಈಗ ಊರಿಗೆ ಉಳಿದಿರುವುದು ಎರಡೇ ಹೊಂಡಗಳು. ಒಂದು ಅಮ್ಮನ ಬಾವಿ ಹೊಂಡ, ಇನ್ನೊಂದು ಮದಕರಿ ವೃತ್ತದಲ್ಲಿ ಇರುವ ಹೊಂಡ. ಅರುಣಾ ಟಾಕೀಸ್ ಬಳಿ (ಹೊಳೆಹೊನ್ನೂರು ತೋಟದಲ್ಲಿ) ಒಂದು ಹೊಂಡವಿತ್ತು ಅದನ್ನು ಇತ್ತೀಚೆಗೆ ಮುಚ್ಚಿಬಿಟ್ಟರು.

ದುಗ್ಗಮ್ಮ, ಬೀರಪ್ಪ, ಆಂಜನೇಯ, ಈಶ್ವರ, ವೀರಭದ್ರೇಶ್ವರ-ಇವೇ ಅಂದಿನ ಊರಿನ ಪ್ರಮುಖ ದೇವಾಲಯಗಳು.

ದುರ್ಗಾಂಬಿಕಾ (ದುಗ್ಗಮ್ಮನ) ದೇವಾಲಯ ಮೊದಲು ಇರಲಿಲ್ಲ. ಅಲ್ಲಿ ಈಶ್ವರನ ಗುಡಿ ಇದ್ದಿರಬಹುದು. ಕಾರಣ ಈ ಈಶ್ವರನಿಗೆ 'ತ್ರಿಭುವನೇಶ್ವರ' ಎಂದು ಹೆಸರು. ದುಗ್ಗಮ್ಮನ ಗುಡಿಯ ಒಳಗೆ ಮೂಲೆಯಲ್ಲಿರುವುದೇ ತ್ರಿಭುವನೇಶ್ವರಲಿಂಗ.

ತ್ರಿಭುವನ ಮಲ್ಲಪಾಂಡ್ಯನು ಈಶ್ವರ ಗುಡಿ ಕಟ್ಟಿಸಿದ್ದರಿಂದ - ತ್ರಿಭುವನೇಶ್ವರ ಎಂದು ಹೆಸರಾಗಿದೆ ಎನ್ನುತ್ತಾರೆ. ಪಾಂಡ್ಯರ ಆಳ್ವಿಕೆಗೆ ಈ ಪ್ರದೇಶ ಒಳಪಟ್ಟಿದ್ದರಿಂದ ಪಾಂಡೇಶ್ವರ ಎಂದು ಶಾಸನದಲ್ಲಿ ಉಲ್ಲೇಖವಿದೆ. ಇದಕ್ಕೆ ಸಾಕ್ಷಿ ಎನ್ನುವುದಾದರೆ ದುಗ್ಗಮ್ಮನ ಗುಡಿಗೆ ಹೋಗುವಾಗ ಎಡ ಭಾಗದಲ್ಲಿ ಗೋಡೆಗೆ ಒರಗಿಸಿದಂತೆ ಒಂದು ಶಾಸನವಿದೆ. ಇದರ ಕಾಲ ಕ್ರಿ.ಶ. 1138 (ಶಾ.ಶ. 1060) ಪಾಂಡೇಶ್ವರ ದೇವರಿಗೆ ಭೂದಾನ ನೀಡಿದ ಸ್ಥಳ. ತ್ರಿಭುವನಮಲ್ಲ ಪಾಂಡ್ಯನ ಮಗ ರಾಯಪಾಂಡ್ಯ ಈ ದೇವರಿಗೆ ಭೂದತ್ತಿ ನೀಡಿದ್ದಾನೆ. ಈ ಶಾಸನದಲ್ಲಿ ಅನೇಕ ಗ್ರಾಮಗಳ ಉಲ್ಲೇಖ ಬರುತ್ತದೆ. ಇದರಲ್ಲಿ 'ಗಾವಣಿಗನ ಹಳ್ಳಿ' ಎಂದು ಬರುತ್ತದೆ. ಗಾವಣಿಗನಹಳ್ಳಿಯೇ ದಾವಣಿಗನ ಹಳ್ಳಿ - ದಾವಣಗೆರೆಯಾಗಿರಬಹುದೇ - ಎಂದು ಸಂಶಯ. ಇದರ ಬಗ್ಗೆ ಸಂಶೋಧನೆ ನಡೆಯಬೇಕಿದೆ.

ದುಗ್ಗಮ್ಮ ಮೊದಲು ಬೇವಿನ ಮರದ ಕೆಳಗೆ ಕತ್ತಲಲ್ಲಿರುವ ಗುಡಿಯಲ್ಲಿದ್ದಳಂತೆ. ಜಾನಪದದ ಹೇಳಿಕೆಯಂತೆ - ಈಕೆ ದುಗ್ಗತ್ತಿಯಿಂದ ಬಂದು ನೆಲೆಸಿದಳಂತೆ. ಸುಮಾರು 100-120 ವರ್ಷಗಳ ಹಿಂದೆ ಈಕೆಗೆ ದೊಡ್ಡ ಗುಡಿ ಕಟ್ಟಿರಬಹುದು. ಮತ್ತು ಊರು ಈ ಭಾಗದಲ್ಲೇ ಇತ್ತು ಎನ್ನಲು - ಈಗಲೂ ಇಲ್ಲಿಯ ಒಂದು ಚಿಕ್ಕ ರಸ್ತೆಗೆ ಹಳೇ ''ಕಛೇರಿ ರಸ್ತೆ'' ಎನ್ನುತ್ತಾರೆ. ಇಲ್ಲಿಯ ಒಂದು ಗರಡಿಗೆ 'ಕೆರೆ ಗರಡಿ, ಸರಕಾರಿ ಗರಡಿ' ಎನ್ನುತ್ತಾರೆ. ಒಂದು ಮಸೀದಿಗೆ - ಹಳೇ ಮಸೀದಿ ಗಲ್ಲಿ ಎನ್ನುತ್ತಾರೆ.

ಊರಿಗೆ ಇರಲೇಬೇಕಾಗಿದ್ದ ಕುಂಬಾರಗಲ್ಲಿ, ಚಿತ್ರಗಾರರ ಗಲ್ಲಿ, ದುಗ್ಗಮ್ಮನ ಗುಡಿ ಹಿಂದೆ - ಕುರುಬರ ಕೇರಿ, ಚಿತ್ರಗಾರರ ಗಲ್ಲಿಯಲ್ಲಿ ಊರಗೌಡರ ಮನೆಗಳು, ಮರಾಠಿ ಸರ್ದಾರನ ಕಾಲದಲ್ಲಿ ಮರಾಠಿಗರು ವಾಸಿಸುತ್ತಿದ್ದ ''ಆರ್ಯರ ಹಟ್ಟಿ'', ಕೊತ್ವಾಲರ ಬೀದಿ, ಈಗಿನ ಕನ್ನಿಕಾ ಪರಮೇಶ್ವರಿ ರಸ್ತೆಯೇ ಆಗಿನ ಬೂಸಾಪೇಟೆ - ಅಕ್ಕಿಜೋಳ ಮಾರುತ್ತಿದ್ದ ರಸ್ತೆ, ಆಮೇಲೆ ದೊಡ್ಡಪೇಟೆಯಾಯಿತು. ಟಿಪ್ಪುವಿನ ಕಾಲದಲ್ಲಿ ಮುಸ್ಲಿಂ ಅಧಿಕಾರಿಗಳು ವಾಸಿಸುತ್ತಿದ್ದ ಸುಲ್ತಾನ್ ಪೇಟೆ, ಪಿಂಜಾರ ಗಲ್ಲಿಗಳು, ದರ್ಗಾಗಳು - ಆದವು. ಈಗಿನ ದಾವಲುಪೇಟೆ ಆಗಿನ ಜಾಡರ ಬೀದಿ. ಆಮೇಲೆ ಕಾಯಿಪೇಟೆ, ಮ್ಯಾಸಬ್ಯಾಡರಕೇರಿ ... ಒಕ್ಕಲಿಗರಪೇಟೆ, ಈಗಿನ ವಿಜಯಲಕ್ಷ್ಮಿ ರಸ್ತೆಯೇ ಆಗಿನ ತಂಬಾಕು ಪೇಟೆ. ಕಾಯಿಪೇಟೆಯ ತುದಿಯಲ್ಲಿ ಬೆಣ್ಣೆ ಮಾರುತ್ತಿದ್ದುದರಿಂದ ಬೆಣ್ಣೆಪೇಟೆ ಆದವು. ಬೆಳ್ಳಿ ಬಂಗಾರದ ರಾಜನಹಳ್ಳಿ

ಮುದ್ದುರಾಯಪ್ಪರ - ಅಂಗಡಿ ಕಟ್ಟೆಯ ಮೇಲೆ ರೈಲ್ವೇ ಟಿಕೇಟುಗಳನ್ನು ಮಾರುತ್ತಿದ್ದರು. ಇದೇ ಕಟ್ಟಡದ ಒಂದು ಭಾಗದಲ್ಲಿ ಅಂದಿನ ಜೈಲು ಇತ್ತು. ಚೌಕಿ ಸರಕಾಗಿ ಕಾವಲು ಸ್ಥಳವಾದ್ದರಿಂದ ಚೌಕಿಪೇಟೆಯಾಯಿತು. ಈಗಿನ ಕಾಳಿಕಾದೇವಿ ರಸ್ತೆ ಆಗ ಕೈಲಾಸ ಪೇಟೆ - ಕಾರಣ ಊರಲ್ಲಿ ಯಾರು ಸತ್ತರೂ ಈ ಮಾರ್ಗವಾಗಿಯೇ ಹೆಣ ಒಯ್ಯುತ್ತಿದ್ದರು. ಈಗಿನ ಬಸವರಾಜಪೇಟೆ - ಅಂದು ಸೂಳೆಯರು ವಾಸಿಸುತ್ತಿದ್ದ ಕುದುರೆಪೇಟೆ.

ರೈಲ್ವೆ ಹಳಿಯನ್ನು ದಾಟಿದರೆ ದಕ್ಷಿಣ ಭಾಗದಲ್ಲಿ ಹೊಸದಾಗಿ ಊರು ಬೆಳೆಯಿತು. ರೈಲ್ವೆ ಸ್ಟೇಷನ್ ಆಗ ಒಂದು ಸಣ್ಣ ಕೊಠಡಿಯಾಗಿ ಆ ಕಡೆ ವಿಭಾಗದಲ್ಲಿತ್ತು. ಈಗಿನ ಹೆಡ್‌ಪೋಸ್ಟ್ ಆಫೀಸ್ ಇರುವ ಜಾಗದಲ್ಲೇ ಅಂದಿನ ದಾವಣಗೆರೆಯ ಬಸ್ ನಿಲ್ದಾಣ. ಮಂಡಿಪೇಟೆಯಲ್ಲಿ ಅಂಚೆ ಕಛೇರಿ ಇತ್ತು. ಈಗಿನ ಮುನ್ಸಿಪಲ್ ಜ್ಯೂನಿಯರ್ ಕಾಲೇಜು ಇರುವ ಸ್ಥಳವೇ ಅಂದಿನ ಟೌನ್ ಹಾಲು (ನಗರಸಭೆ) - ಶಾಂತಿ ಟಾಕೀಸ್ ಬಳಿ ಇರುವ ಬಸ್‌ಸ್ಟ್ಯಾಂಡ್ ಆಗ ಊರಿನ ಸಂತೆ ನಡೆಯುವ ಸ್ಥಳ. ಹೊಂಡದ ಸರ್ಕಲ್‌ನಲ್ಲೇ ದನಗಳ ಸಂತೆ ನಡೆಯುತ್ತಿತ್ತು.

1937ರಲ್ಲಿ ಗಡಿಯಾರ ಕಂಬ ಕಟ್ಟಲಾಯಿತು. ಆಗಿನ ಹಳೆ ಊರಲ್ಲಿ ಮಠಗಳೆಂದರೆ, ದೊಡ್ಡಪೇಟೆಯ ವಿರಕ್ತಮಠ, ಮೈಸೂರು ಮಠ, ಹಳೇಪೇಟೆಯ ಹಿರೇಮಠ, ತಿರುಕಪ್ಪನವರ ಮಠಗಳು. ಊರಿನ ಆಸ್ಪತ್ರೆಗಳೆಂದರೆ, ದೇವಾಂಗದವರ ಪೇಟೆಯಲ್ಲಿ ಟೌನ್ ಮುನಿಸಿಪಾಲಿಟಿಯಿಂದ ನಡೆಯುತ್ತಿದ್ದ ಒಂದು ಚಿಕ್ಕ ಆಸ್ಪತ್ರೆ, ನಂತರ 1936-37ರಲ್ಲಿ ರಾಜನಹಳ್ಳಿ ಹನುಮಂತಪ್ಪನವರಿಂದ ಕಟ್ಟಲಾದ ಹೆಂಗಸರ ಮತ್ತು ಮಕ್ಕಳ ಆಸ್ಪತ್ರೆ.

ಊರಿನ ನಾಟಕ ಕಂಪೆನಿ ಎಂದರೆ - ವಸಂತಾ ರಸ್ತೆಯಲ್ಲಿದ್ದ ಸಾವಳಿಗೆ ಥಿಯೇಟರ್. ಸಿನಿಮಾ ಮಂದಿರವೆಂದರೆ ಚಾಮರಾಜಪೇಟೆಯಲ್ಲಿದ್ದ ಧನಲಕ್ಷ್ಮಿ ಥಿಯೇಟರ್. ಸುಮಾರಾಗಿ 1940-41ರಲ್ಲಿ ದಾವಣಗೆರೆಗೆ ರೈಲು ಬಂದಿದೆ. 1952ರಲ್ಲಿ ದಾವಣಗೆರೆಗೆ ದೂರವಾಣಿ ಬಂದಿದೆ. 1938ರಲ್ಲಿ ದಾವಣಗೆರೆಗೆ ಪ್ರಥಮವಾಗಿ ವಿದ್ಯುಚ್ಛಕ್ತಿ ದೊರೆತಿದೆ. 1923ರಲ್ಲಿ ದಾವಣಗೆರೆಯಲ್ಲಿ ಮುನ್ಸಿಫ್ ನ್ಯಾಯಾಲಯ ಪ್ರಾರಂಭವಾಗಿತ್ತು. ಈಗಿನ ಗ್ರಂಥಾಲಯದ ಕಟ್ಟಡ 1937ರಲ್ಲಿ ಕಟ್ಟಲಾದ ಸಿಲ್ವರ್ ಜ್ಯೂಬಿಲಿ ರೀಡಿಂಗ್ ರೂಮ್ ಆಗಿತ್ತು. ಶ್ರೀ ರಾಜನಹಳ್ಳಿ ಹನುಮಂತಪ್ಪನವರ ಧರ್ಮ ಛತ್ರವನ್ನು 1942ರ ಜುಲೈ 15ನೇ ತಾರೀಖು ಶ್ರೀ ಜಯಚಾಮರಾಜೇಂದ್ರ ಒಡೆಯರ್ ಪ್ರಾರಂಭಿಸಿದರು. ಈಗಿನ ಹೈಸ್ಕೂಲ್ ಮೈದಾನಕ್ಕೆ ಆಗ ಗಾಂಧಿ ಮೈದಾನ ಎನ್ನುತ್ತಿದ್ದರು. ಗಡಿಯಾರ ಕಂಬದ ಬಳಿ ಇರುವ ಶ್ರೀ ಚನ್ನಗಿರಿ ವಿರೂಪಾಕ್ಷಪ್ಪನವರ ಧರ್ಮ ಶಾಲೆಯನ್ನೂ 19ನೇ ಶತಮಾನದಲ್ಲಿ ಕಟ್ಟಲಾಗಿತ್ತು. ತರಕಾರಿ ಮಾರ್ಕೆಟ್ ಬಳಿ ಇರುವ ಮಾಧ್ಯಮಿಕ ಮತ್ತು ಉರ್ದು ಶಾಲೆಗಳನ್ನು 1900ರಲ್ಲಿ ಕಟ್ಟಲಾಗಿದೆ. ಈಗಿನ ಸರ್ಕಾರಿ ಪ್ರೌಢಶಾಲೆಯನ್ನು 1922ರಲ್ಲಿ ಪ್ರಾರಂಭವಾಗಿದೆ. ಈಗಿನ ಶಿವಯೋಗಿ ಮಂದಿರವನ್ನು 1911ರಲ್ಲಿ ದಾನ ನೀಡಲಾಗಿದೆ. ಬೀರಲಿಂಗೇಶ್ವರ ಗುಡಿಯ ಹತ್ತಿರದ ಮೈದಾನದಲ್ಲಿ ಒಂದು ಚಿಕ್ಕ ಕೆರೆ ಇತ್ತು. ರೇಣುಕಾ ಮಂದಿರ, ಶಿವಯೋಗಿ ಮಂದಿರ ಮುಂತಾದವೆಲ್ಲ ಆಗಿನ ಹೊಲಗಳು... ಜೋಳ ಬೆಳೆಯುತ್ತಿದ್ದರು. ಮತ್ತು ಬೀರಲಿಂಗೇಶ್ವರ ದೇವಸ್ಥಾನದ ಬಳಿ ಒಂದು ಚಿಕ್ಕ ಹಳ್ಳಿ ಬೀರೇನಹಳ್ಳಿ ಇತ್ತು.

ಮಂಡಿಪೇಟೆಯಲ್ಲಿ - 1913ರಲ್ಲಿ ''ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, 1934ರಲ್ಲಿ ವೈಶ್ಯ ಬ್ಯಾಂಕ್, 1935ರಲ್ಲಿ ಕೆನರಾ ಬ್ಯಾಂಕ್ ಪ್ರಾರಂಭವಾಗಿದ್ದವು.

ದಾವಣಗೆರೆಯಲ್ಲಿ - 1936ರಲ್ಲಿ ದಾವಣಗೆರೆ ಕಾಟನ್ ಮಿಲ್ ಪ್ರಾರಂಭವಾಗಿ 'ದಾವಣಗೆರೆ'ಗೆ 'ಕರ್ನಾಟಕದ ಮ್ಯಾಂಚೆಸ್ಟರ್' ಎನ್ನುವ ಹೆಗ್ಗಳಿಕೆ ಬಂದಿತು. 1918ರಲ್ಲಿ ಬಿ.ಟಿ. ಎಣ್ಣೆ ಮಿಲ್ ಪ್ರಾರಂಭವಾಗಿತ್ತು. 1900 ರಲ್ಲಿ ಹರಿಹರದ ತುಂಗಭದ್ರಾ ನದಿಯಿಂದ ಕುಡಿಯುವ ನೀರಿನ ವ್ಯವಸ್ಥೆಯನ್ನು ನಲ್ಲಿಗಳ ಮೂಲಕ ದಾವಣಗೆರೆಗೆ ಕಲ್ಪಿಸಲಾಯಿತು. 1946ರಲ್ಲಿ ಇಂದಿನ ನಗರಸಭೆಯನ್ನು ಕಟ್ಟಲಾಯಿತು. 1900ರಲ್ಲಿ ದಾವಣಗೆರೆಯ ಜನಸಂಖ್ಯೆ ಕೇವಲ 10,000.

ಹೀಗೆ - ಈ ಎಲ್ಲ ಮೇಲ್ಕಾಣಿಸಿದ ಅಂಶಗಳನ್ನು ಗಮನಿಸಿದರೆ - ದಾವಣಗೆರೆಯ ಪ್ರಾಚೀನ ಇತಿಹಾಸದ ಒಂದು ಚಿತ್ರಣ ಸಿಗುತ್ತದೆ. ಮತ್ತು ಕೇವಲ 100-150 ವರ್ಷಗಳಲ್ಲಿ ದಾವಣಗೆರೆ ಎಷ್ಟು ಕ್ಷಿಪ್ರವಾಗಿ ಬೆಳೆದಿದೆ, ಎಂಬುದನ್ನು ತಾವೆಲ್ಲ ಗಮನಿಸುತ್ತಿದ್ದೀರಿ. ●

## ನೀತಿ-ನಿಯಮಗಳು ಪ್ರಗತಿಯ ಸಾಧನಗಳು

ನಿಮ್ಮ ಪ್ರಗತಿಗಾಗಿ ಇವುಗಳನ್ನು ಪಾಲಿಸಿ

ನಿಮ್ಮ ಸುರಕ್ಷತೆಗಾಗಿ ಪಾಲಿಸಿ

ನಿಮ್ಮ ರಕ್ಷಣೆಗಾಗಿ ಪಾಲಿಸಿ

ಸಾರ್ವಜನಿಕರ/ ಸಹಚರರ ಅನುಕೂಲತೆಗಾಗಿ ಪಾಲಿಸಿ

ಮಾನವ ನಿರ್ಮಿತ ಮತ್ತು ನೈಸರ್ಗಿಕ ಸಂಪತ್ತಿನ ಸಂರಕ್ಷಣೆಗಾಗಿ ಪಾಲಿಸಿ

ಸ್ನೇಹ, ನೆಮ್ಮದಿ ಮತ್ತು ಶಾಂತಿಗಾಗಿ ಪಾಲಿಸಿ

ರಾಷ್ಟ್ರದ ಪ್ರಗತಿಗಾಗಿ ಇವುಗಳನ್ನು ಪಾಲಿಸಿ ●

ಮೂರ್ಖರ ಗುಲಾಮನಾಗಿರುವುದಕ್ಕಿಂತ, ವಿದ್ವಾಂಸರ ದಾಸನಾಗಿರು - ಸೂರ್‌ದಾಸ್.



# ಸ್ಕೌಟಿಂಗ್ - ಸಂದೇಶ

ಶ್ರೀ ಎಂ.ಎಂ.ಲೋಂಡೆ
ಎಲ್.ಟಿ.(ಸ್ಕೌಟ್ಸ್)
ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ.

'ಸ್ಕೌಟಿಂಗ್' ಇದು ಒಂದು ಮಹಾನ್ ಆಟವೆಂದು ಪರಿಗಣಿಸಲಾಗಿದೆ. ಇದರ ಸಂಸ್ಥಾಪಕ ಲಾರ್ಡ್ ಬೇಡನ್ ಪೊವೆಲ್ ಮಕ್ಕಳಿಗಾಗಿಯೇ ಇದನ್ನು ಸಂಘಟಿಸಿ ಇಡೀ ವಿಶ್ವಕ್ಕೆ ಒಂದು ಮುಖ್ಯ ಕಾಣಿಕೆಯನ್ನು ನೀಡಿದ್ದಾರೆ. ಈ ಆಟದಲ್ಲಿ ಭಾಗವಹಿಸುವ ನಾವೆಲ್ಲರೂ ಅದೇ ಭಾವನೆಯಿಂದ ಆಸಕ್ತಿ ವಹಿಸಿ ಭಾಗವಹಿಸಬೇಕು ಮತ್ತು ಇದರ ಲಾಭ ಪಡೆದುಕೊಳ್ಳಬೇಕು.

'ಸ್ಕೌಟಿಂಗ್' ಮಕ್ಕಳ ಚಾರಿತ್ರ್ಯವನ್ನು ಬೆಳೆಸುತ್ತದೆ. ದೈಹಿಕ ಶಕ್ತಿಯನ್ನು ಹೆಚ್ಚಿಸಿ ಆರೋಗ್ಯವಂತ ವ್ಯಕ್ತಿತ್ವವನ್ನು ರೂಪಿಸುತ್ತದೆ. ಅವಶ್ಯಕವಾದ ಮತ್ತು ಉಪಯುಕ್ತವಾಗುವ ನೈಪುಣ್ಯತೆಯನ್ನು ಕಲಿಸುತ್ತದೆ. ಸೇವಾ ಭಾವನೆಯನ್ನು ಹೆಚ್ಚಿಸಿ ನಾಗರಿಕತ್ವದ ಮೂಲ ಗುಣಗಳನ್ನು ಬೆಳೆಸುತ್ತದೆ. ಯಾವುದೇ ಕಾರ್ಯ ಕೈಕೊಳ್ಳಲು ಸಾಮರ್ಥ್ಯ ನೀಡುತ್ತದೆ. ಪರಸ್ಪರ ಸಹಕಾರ, ಸಹಾಯ, ಸಹಾನುಭೂತಿ, ಪರಸ್ಪರ ಪ್ರೀತಿ, ವಿಶ್ವಾಸ, ತಮ್ಮತಮ್ಮ ಧರ್ಮದ ಬಗೆಗೆ ಭಕ್ತಿ ನಿಸರ್ಗ ಪ್ರೇಮ ಮೊದಲಾದವುಗಳನ್ನು ಬೆಳೆಸುತ್ತದೆ. ಕರ್ತವ್ಯ ಪಾಲನೆಯ ಅರಿವು ಮೂಡಿಸುತ್ತದೆ. ಆತ್ಮ ಗೌರವ, ಶಿಸ್ತು ಸಂಯಮ, ವಿಧೇಯತೆ ಮತ್ತು ದೇಶಾಭಿಮಾನವನ್ನು ಹೆಚ್ಚಿಸುತ್ತದೆ. ಹೀಗೆ ಮಕ್ಕಳ ಜೀವನದಲ್ಲಿ ಸಂತಸದ ಸಮಯವನ್ನು ಹೆಚ್ಚಿಸುತ್ತದೆ.

ಕೊಲಂಬಿಯಾ ವಿಶ್ವವಿದ್ಯಾಲಯದ ಶಿಕ್ಷಣ ತಜ್ಞ ಡೀನ್ ರೂಸೆಲ್‌ರವರು ಸ್ಕೌಟಿಂಗ್ ನಿಕಟ ಸಂಪರ್ಕದಿಂದ ಪ್ರೇರಿತರಾಗಿ ಒಂದು ಅಧ್ಯಯನವನ್ನು ಕೈಕೊಂಡು ಸ್ಕೌಟಿಂಗ್‌ನಲ್ಲಿರುವ ಒಂದು ದೊಡ್ಡ ಮಾನವೀಯ ಮೌಲ್ಯವನ್ನು ಕಂಡು ಹಿಡಿದಿದ್ದಾರೆ. ಅವರ ಪ್ರಕಾರ ಮಕ್ಕಳ ಜೀವನದಲ್ಲಿ ಸ್ಕೌಟಿಂಗ್ ಅದ್ಭುತ ಮತ್ತು ಕ್ರಾಂತಿಕಾರಿ ಪರಿಣಾಮವನ್ನು ಬೀರಬಲ್ಲದು. ಇದರಲ್ಲಿರುವ ವಿವಿಧ ವಿಷಯ ಮತ್ತು ಚಟುವಟಿಕೆಗಳಿಗಿಂತ ಅವುಗಳನ್ನು ಕಾರ್ಯರೂಪಕ್ಕೆ ತರುವ ವಿಧಾನವನ್ನು ಹೆಚ್ಚು ಮೆಚ್ಚಿದ್ದಾರೆ. ಮಕ್ಕಳಿಗೆ ಆಟ ಬೇಕು ಆಟವೇ ಪಾಠವಾಗಬೇಕು ಆಟ ಪಾಠಗಳೆರೆಡೂ ಅವರ ವ್ಯಕ್ತಿತ್ವದ ವಿಕಸನಕ್ಕೆ ಮಾರ್ಗವಾಗಬೇಕು.

'ಮಾಡಿ ಕಲಿ' ಈ ಸಿದ್ಧಾಂತದಿಂದ ಅನೇಕ ಕ್ರಾಂತಿಕಾರಿ ಪರಿಣಾಮಗಳಾಗುವುವು. ಶಾಲೆಗಳಲ್ಲಿ ಶಾಲಾ ಕಾರ್ಯಕ್ರಮದಲ್ಲಿ ಮಕ್ಕಳಿಗೆ ಸಿಗದೇ ಇದ್ದ ಚಟುವಟಿಕೆಗಳನ್ನು ಸ್ಕೌಟಿಂಗ್‌ನಿಂದ ಕೊಡಬಹುದು. ಮಕ್ಕಳ ಮೇಲೆ ಜವಾಬ್ದಾರಿ ಹಾಕಿ ಅನೇಕ ಸಾಧನೆಗಳನ್ನು ಸಾಧಿಸಲು ಉತ್ತೇಜನ ಕೊಡಬಹುದು. ಸ್ಕೌಟಿಂಗ್ ಮಕ್ಕಳಿಗೆ ಇಷ್ಟವಿರುವಂತೆ ಬೇರೆ ಯಾವ ಸಂಘಟನೆಯಾಗಲೀ, ಯೋಜನೆಯಾಗಲೀ ಅಷ್ಟೊಂದು ಪರಿಣಾಮ ಬೀರಲಾರದು ಅಂತೆಯೇ ಲಾರ್ಡ್ ಬೇಡನ್ ಪೊವೆಲ್‌ರು 'ಸ್ಕೌಟಿಂಗ್ ಫಾರ್ ಬಾಯ್ಸ್' - ಮಕ್ಕಳಿಗೆ ಸ್ಕೌಟಿಂಗ್ ಎಂದು ಸಿದ್ಧಪಡಿಸಿದ ಈ ಮಹಾನ್ ಮತ್ತು ವಿಶಾಲ ಆಟವು ಇಂದು ವಿಶ್ವದಾದ್ಯಂತ ಎಲ್ಲ ದೇಶಗಳಲ್ಲಿ ಬೆಳೆಯುತ್ತಿದೆ. ಪ್ರಪಂಚದ ಅನೇಕ ರಾಷ್ಟ್ರಗಳು ತಮ್ಮ ಶೈಕ್ಷಣಿಕ ಯೋಜನೆಗಳಲ್ಲಿ ಇದಕ್ಕೆ ಮಹತ್ವದ ಸ್ಥಾನವನ್ನು ನೀಡಿದ್ದಾರೆ. ಮಕ್ಕಳೇ ಅವರ ನಾಯಕರನ್ನು ಆಯ್ಕೆ ಮಾಡಿಕೊಂಡು ವಿವಿಧ ಚಟುವಟಿಕೆಗಳ ಜವಾಬ್ದಾರಿ ತೆಗೆದುಕೊಂಡು ತಮ್ಮ ತಮ್ಮ ಚಿಕ್ಕ ಗುಂಪುಗಳಲ್ಲಿ ಸಂಪೂರ್ಣ ತಲ್ಲೀನರಾಗಿ ಆತ್ಮ ಸಂಯಮ, ಶಿಸ್ತು, ಸಹಕಾರ, ಸ್ವಯಂ ನಿರ್ದೇಶನ ಹಾಗೂ ಸ್ವಯಂ ನಿರ್ಧಾರದಿಂದ ಮಹತ್ವದ ಕಾರ್ಯವನ್ನು ಸಾಧಿಸುತ್ತಾರೆ. ''ಜೀವಿಸಲು ಗಳಿಸುವುದು ಹೇಗೆ'' ಎನ್ನುವುದಕ್ಕಿಂತಲೂ ''ಜೀವಿಸುವುದು ಹೇಗೆ'' ಎಂಬುದರ ಅರಿವು ಮೂಡಿಸಿ ತಮ್ಮ ಜೀವನ ಎಷ್ಟು ಉತ್ತಮವಾಗಿ ರೂಪಿಸಿಕೊಳ್ಳಬೇಕೆಂಬುದನ್ನು ಸ್ಕೌಟಿಂಗ್‌ನಿಂದ ಕಲಿಯುತ್ತಾರೆ.

ಇಷ್ಟೆಲ್ಲಾ ಉತ್ತಮಾಂಶವನ್ನು ಕಲಿಸುವ ಸ್ಕೌಟಿಂಗ್ ಮಕ್ಕಳಿಗೆ ಆಕರ್ಷಣೀಯವಾದುದು. ಇಂದಿನ ಮಕ್ಕಳೇ ನಾಳಿನ ನಾಗರಿಕರು. ಮಕ್ಕಳು ತಮ್ಮ ಜೀವನದ ಶಿಲ್ಪಿಗಳು ತಾವೇ ಆಗಬೇಕೆಂದು ಆಶಿಸುವ ನಾವೆಲ್ಲರೂ ಮಕ್ಕಳಿಗೆ ಅವರ ಸ್ಕೌಟ್ ಮಾಸ್ಟರರ ಮಾರ್ಗದರ್ಶನ, ಸರಿಯಾದ ತರಬೇತಿ ಅತೀ ಅವಶ್ಯವಾಗಿದೆ ಎಂಬುದನ್ನು ಎಂದೂ ಮರೆಯಬಾರದು. ಮಕ್ಕಳಿಗೆ ಜವಾಬ್ದಾರಿ ವಹಿಸಿ, ವಯಸ್ಕರರ ಮಾರ್ಗದರ್ಶನದ ಅಡಿಯಲ್ಲಿ ಅದ್ಭುತ ಸಾಧನೆಯನ್ನು ಮಾಡಬಹುದು. ಮಕ್ಕಳಿಗೆ ಪ್ರೀತಿಯಿಂದ ಎಲ್ಲ ವಿಷಯಗಳನ್ನು ಚಟುವಟಿಕೆಗಳನ್ನು ಸರಿಯಾಗಿ ಕಲಿಸುತ್ತ, ಪ್ರಗತಿ ಪಥದಲ್ಲಿ ಸಾಗಲು ಕಲಿಸುವವರೇ ಸ್ಕೌಟ್ ಮಾಸ್ಟರರು. ಇವರು ಹೇಳಿದ ಪ್ರತಿಯೊಂದು ಮಾತು ಮಕ್ಕಳ ಮನಸ್ಸಿನ ಮೇಲೆ ಪರಿಣಾಮ ಬೀರುತ್ತದೆ. ಅವರು ಮಾಡಿದ ತಪ್ಪುಗಳನ್ನು ತಿದ್ದುವಲ್ಲಿ ಸ್ಕೌಟ್ ಮಾಸ್ಟರ ಕೈಕೊಂಡ ವಿಧಾನವು ಅವರ ಜೀವನದ ಗತಿಯನ್ನೇ ಬದಲಿಸುವುದು. ತಮ್ಮ ಸ್ಕೌಟ್ ಮಾಸ್ಟರರ ಮಾತು ಮಕ್ಕಳಿಗೆ ವೇದವಾಕ್ಯ ಅದನ್ನು ಬದಲಿಸುವದು ಅಸಾಧ್ಯ. ಅಂದ ಮೇಲೆ ಸ್ಕೌಟ್ ಮಾಸ್ಟರರ ಜವಾಬ್ದಾರಿ ಎಷ್ಟೊಂದು ಇದೆ ಎಂಬುದನ್ನು ನಾವು ಸ್ಪಷ್ಟವಾಗಿ ತಿಳಿದುಕೊಳ್ಳಬೇಕು.

ಇಂದಿನ ಸ್ಕೌಟುಗಳು ನಾಳಿನ ನಾಗರಿಕರು. ಉತ್ತಮ ರಾಷ್ಟ್ರಕ್ಕೆ ಉತ್ತಮ ನಾಗರಿಕರೇ ಬೇಕು. ಅಂತಹ ರಾಷ್ಟ್ರ ನಿರ್ಮಾಣದ ಕಾರ್ಯದಲ್ಲಿ ಸ್ಕೌಟ್ ಮಾಸ್ಟರರಿಗೂ ಮಹತ್ವದ ಪಾತ್ರ ಇದೆ ಎಂಬುದನ್ನು ಮರೆಯಕೂಡದು. ಮಕ್ಕಳಿಗೆ ಅವರ ಆದರ್ಶದಾಯಕ ಜೀವನವು ಒಂದು ಉದಾಹರಣೆಯಾಗುವುದು. ಮಕ್ಕಳೇ ನಮ್ಮ ನ್ಯಾಯಾಧೀಶರು ನಾವು ಮಾಡಿದ ಪ್ರತಿಯೊಂದು ತಪ್ಪು ಮಕ್ಕಳ ಮನಸ್ಸಿಗೆ ನೋವು ಉಂಟು ಮಾಡುವುದು. ಸ್ಕೌಟಿಂಗ್ ವಿಷಯ ಮತ್ತು ವಿಧಾನಗಳ ಬಗೆಗೆ ಎಚ್ಚರಿಕೆ ವಹಿಸಬೇಕು. ಸರಿಯಾಗಿ ವಿಷಯದ ಸಿದ್ಧತೆ ಮಾಡಿಕೊಂಡು ಹಸನ್ಮುಖರಾಗಿ ಯಾವಾಗಲೂ ಕ್ರಿಯಾಶೀಲರಾಗಿ ಮಕ್ಕಳನ್ನು ಸಂತೋಷಪಡಿಸುತ್ತಾ ಕಲಿಸಬೇಕು. ಸಂಸ್ಥಾಪಕ ಲಾರ್ಡ್ ಬೇಡನ್ ಪಾವೆಲ್ಲರ ಆದರ್ಶವನ್ನು ಮುಂದೆ ಇಟ್ಟುಕೊಂಡು ಮಕ್ಕಳಿಗೆ ತರಬೇತಿ ನೀಡಬೇಕು. ಹಾಗೆ ಮಾಡಿದರೆ ಮಾತ್ರ ಯಾವ ಉದ್ದೇಶಕ್ಕಾಗಿ ಸ್ಕೌಟಿಂಗ್ ಸ್ಥಾಪಿತವಾಗಿದೆಯೋ: ಆ ಉದ್ದೇಶವನ್ನು ನಾವೆಲ್ಲರೂ ಸಾಧಿಸಿದಂತಾಗುತ್ತದೆ. ಮತ್ತು ಸ್ಕೌಟಿಂಗ್ ಕೊನೆಯವರೆಗೂ ಪ್ರಗತಿಯಾಗುತ್ತಾ ಸಾಗುತ್ತದೆ.

ತನ್ನ ಅಂತಸ್ತಿಗಿಂತಲೂ ಕೆಳಮಟ್ಟದವನನ್ನು ಗೌರವದಿಂದ ನಡೆಸಿಕೊಳ್ಳುವವನೇ ನಿಜವಾದ ದೊಡ್ಡ ಮನುಷ್ಯ - ಕಾರ್ಲೈಲ್.



ಕರ್ನಾಟಕದ ಬೇಡನ್ ಪೌಲ್

# ಕೊಂಡಜ್ಜಿ ಬಸಪ್ಪನವರು

ಡಾ|| ಕೆ.ಜಿ. ಗುರುಮೂರ್ತಿ
ಮಾನವಶಾಸ್ತ್ರದ ನಿವೃತ್ತ ಪ್ರಾಧ್ಯಾಪಕರು ಮತ್ತು
ಕನ್ನಡ ಸಾಹಿತ್ಯ ಪರಿಷತ್ ಸದಸ್ಯರು, ದಾವಣಗೆರೆ.

ಯಾರಾದರೊಬ್ಬ ಮಹಾಪುರುಷನ ಪರಿಪೂರ್ಣವಾದ ವ್ಯಕ್ತಿತ್ವದ ಬಗ್ಗೆ ಹೇಳುವಾಗ ಆತನಲ್ಲಿ 'ಆನೆಯ ಗಾಂಭೀರ್ಯ, ಇರುವೆಯ ಪರಿಶ್ರಮ, ಭೂಮಿಯ ತಾಳ್ಮೆ, ಮಗುವಿನ ಮುಗ್ಧತೆ' ಇದೆ ಎಂದು ಹೇಳುವುದು ಸಹಜ. ಆದರೆ ಈ ಎಲ್ಲಾ ಕಲ್ಯಾಣ ಗುಣಗಳೂ ಒಬ್ಬ ವ್ಯಕ್ತಿಯಲ್ಲಿ ಕೂಡಿರುವುದು ವಿರಳ. ಅಂತಹ ಓರ್ವ ವಿರಳ ವ್ಯಕ್ತಿ ಕೊಂಡಜ್ಜಿ ಬಸಪ್ಪನವರು. ಜೀವನದಲ್ಲಿ ಸ್ಥಾನಮಾನ, ಘನತೆ ಗೌರವ, ಆರೋಗ್ಯ, ಅಧಿಕಾರ, ಶಾಂತಿ, ಸಮಾಧಾನ, ಅಪಾರ ಬಂಧು ಬಳಗ ಮುಂತಾದವೆಲ್ಲವನ್ನು ಸ್ವಾಭಾವಿಕವಾಗಿ ಪಡೆದವರು ಕೆಲವರಾದರೆ, ಇವೆಲ್ಲವನ್ನೂ ಸ್ವಪ್ರಯತ್ನದಿಂದ ಗಳಿಸಿ, ಉಳಿಸಿಕೊಂಡು ಬಂದವರು ಇನ್ನೂ ಕೆಲವರು. ಕೆಲವರಿಗೆ ಸ್ಥಾನಮಾನ, ಅಧಿಕಾರ ಮುಂತಾದವು ಬದಲಾದ ಸನ್ನಿವೇಶಕ್ಕೆ ಅನುಗುಣವಾಗಿ ಅಥವಾ ಅದೃಷ್ಟವಶಾತ್ ಸಿಕ್ಕಿರಬಹುದು. ಆದರೆ ಕೊಂಡಜ್ಜಿಯವರ ಗಳಿಕೆ ಅವರ 35ಕ್ಕೂ ಮೇಲ್ಪಟ್ಟ ವರ್ಷಗಳ ಸತತ ಪರಿಶ್ರಮದಿಂದ ಹಂತ ಹಂತವಾಗಿ, ಹನಿಹನಿಯಾಗಿ ಕೂಡಿ ಬಂದುದರ ಫಲ . ಜನ್ಮತ ಕುಟುಂಬದ ಪರಿಸರದಿಂದ ಪಡೆದುದಲ್ಲ.

ಹೊರ ಜಗತ್ತನ್ನು ಮುಟ್ಟದ, ವಿದ್ಯಾ ಸಂಸ್ಕೃತಿಗಳಿಂದ ದೂರವಾಗಿದ್ದ ಹಳ್ಳಿಯೊಂದರಲ್ಲಿ, ಮಧ್ಯಮ ವರ್ಗದ ರೈತಾಪಿ ಕುಟುಂಬದಲ್ಲಿ ಐದು ಮಕ್ಕಳಲ್ಲಿ ಒಬ್ಬರಾಗಿ 1915ನೇ ಡಿಸೆಂಬರ್ 14ರಂದು ಶ್ರೀ ಕೊಂಡಜ್ಜಿಯವರು ಹುಟ್ಟಿದರು. ತಮ್ಮ ಪರಿಶ್ರಮದ ಫಲದಿಂದ ಮಲೇಬೆನ್ನೂರು, ದಾವಣಗೆರೆ, ಮುಂದೆ ಬೆಂಗಳೂರಿನಲ್ಲಿ ಓದಿ, ಬಿ.ಎಸ್.ಸಿ. ಪದವಿ ಪಡೆದು ನಂತರ ಪೂನಾ ವಿಶ್ವವಿದ್ಯಾಲಯದಿಂದ ಕಾನೂನು ಪದವಿ ಗಳಿಸಿದರು. ದಾವಣಗೆರೆಯಲ್ಲಿ ತಮ್ಮ ವಕಾಲತ್ ಪ್ರಾರಂಭಿಸಿದಂದಿನಿಂದಲೂ ರಾಜಕೀಯ ಅಂಟಿ ಬಂದಿತು. 1940-42ರಲ್ಲಿ ಇವರು ಕೇವಲ 28 ವರ್ಷ ವಯಸ್ಸಿನವರಿರುವಾಗಲೇ ಚಿತ್ರದುರ್ಗ ಜಿಲ್ಲಾ ಬೋರ್ಡಿನ ಅಧ್ಯಕ್ಷರಾಗಿ ಸೇವೆ ಸಲ್ಲಿಸಿದರು. ಆ ದಿನಗಳು ನಾಡಿನ ರಾಜಕೀಯ ಚರಿತ್ರೆಯ ದೃಷ್ಟಿಯಿಂದ ಅತ್ಯಂತ ಕಷ್ಟಕರವಾದ ದಿನಗಳು. ಎರಡನೆಯ ಮಹಾಯುದ್ಧದಿಂದಾಗಿ ಆಹಾರ ಧಾನ್ಯಗಳು, ಬಟ್ಟೆ ಮುಂತಾದ ದಿನ ಬಳಕೆಯ ವಸ್ತುಗಳನ್ನು ನಿಯಂತ್ರಣದಲ್ಲಿ ವಿತರಣೆ ಮಾಡುತ್ತಿದ್ದ ಕಾಲ ಮತ್ತು ಸ್ವರಾಜ್ಯ ಉದಯವಾಗುತ್ತಿದ್ದ ಸಂಧಿಕಾಲ. ಎಲ್ಲೆಲ್ಲೂ ಅರಾಜಕತೆ, ಅನಾಯಕತ್ವ ದೇಶದ ಪರಿಸ್ಥಿತಿ ಹೀಗಿದ್ದಾಗ ಆಡಳಿತದಲ್ಲಿ ದಕ್ಷರಾಗಿ, ಜನಾನುರಾಗಿಗಳಾಗಿ ಇವರಂತೆ ಸರ್ಕಾರ ಮತ್ತು ಜನತೆಯ ಮನ್ನಣೆ ಪಡೆದವರು ಸ್ವಲ್ಪ ಜನ ಮಾತ್ರ. ಕೊಂಡಜ್ಜಿಯವರು ಆಗ ಮಾಡಿದ ದೇಶ ಸೇವೆಗಾಗಿ ಶ್ರೀಮನ್ ಮಹಾರಾಜರಿಂದ ಅವರಿಗೆ ವಿಶೇಷ ಸೇವಾ ಬಂಗಾರದ ಪದಕ ದೊರಕಿದ್ದಿತು.

ದೇಶ ಸ್ವತಂತ್ರವಾಗಿ ಬದಲಾವಣೆಯತ್ತ ನಡೆದಾಗ ಕೊಂಡಜ್ಜಿಯವರು ಸಾರ್ವಜನಿಕ ಜೀವನದ ಅನೇಕ ಮುಖಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಇವರು ಮೈಸೂರು ವಿಶ್ವ ವಿದ್ಯಾನಿಲಯದ ಸೆನೆಟ್ ಮತ್ತು ಸಿಂಡಿಕೇಟ್ ಸದಸ್ಯರಾಗಿ, ಮುಂದೆ ಕೃಷಿ ಮಹಾ ವಿದ್ಯಾಲಯದ ಬೋರ್ಡ್ ಆಫ್ ರೀಜೆಂಟ್ಸ್‌ನ ಸದಸ್ಯರಾಗಿ ಸಲ್ಲಿಸಿದ ಸೇವೆಯನ್ನು ಯಾವ ಪ್ರಜ್ಞಾವಂತನೂ,ವಿದ್ಯಾವಂತನೂ, ಅಧಿಕಾರಿಯೂ ಮರೆಯುವಂತಿಲ್ಲ. ಇವರ ಈ ಅಧಿಕಾರ ಅವಧಿಯಲ್ಲಿ ಅನೇಕ ಕಡೆ ಮುಖ್ಯವಾಗಿ ಚಿತ್ರದುರ್ಗ ಮತ್ತು ದಾವಣಗೆರೆಗಳಲ್ಲಿ ಕಾಲೇಜ್‌ಗಳು ತೆರೆಯಲ್ಪಟ್ಟವು. ಇವರ ಪರಿಶ್ರಮದ ಕುರುಹಾಗಿ ದಾವಣಗೆರೆಯಲ್ಲಿ ಇಂದು ಒಂದು ಸರ್ಕಾರಿ ವೃತ್ತಿ ಶಿಕ್ಷಣ ಸಂಸ್ಥೆ . ತಾಂತ್ರಿಕ ಮಹಾವಿದ್ಯಾಲಯ ಮತ್ತು ಪದವಿ ಮಟ್ಟದ ಮಹಾವಿದ್ಯಾಲಯಗಳು ಸ್ಥಾಪಿತವಾಗಿವೆ. ಇವುಗಳ ಸ್ಥಾಪನೆಗೆ ಸರ್ಕಾರದಿಂದ ಸೂಕ್ತ ಧನ ಸಹಾಯ ಬಂದಾಗ, ದಾವಣಗೆರೆಯ ಶ್ರೀಮಂತರನ್ನು ಕಂಡು ''ಕೆರೆಯ ನೀರನ್ನು ಕೆರೆಗೆ ಚೆಲ್ಲಿ ವರವ ಪಡೆಯಿರಿ'' ಎಂದು ಅವರ ಮನವೊಲಿಸಿ, ಲಾಭ ರೂಪದಲ್ಲಿ ಬಂದ ಹಣವನ್ನು ಮತ್ತೆ ಸಮಾಜದ ಕಲ್ಯಾಣಕ್ಕೆ ಬರುವಂತೆ ಮಾಡಿದರು. ಇಂದು ದಾವಣಗೆರೆಯಲ್ಲಿಯ ವೈದ್ಯಕೀಯ ಮಹಾವಿದ್ಯಾಲಯವೂ ಸೇರಿದಂತೆ ಅನೇಕ ವಿದ್ಯಾ ಸಂಸ್ಥೆಗಳ ಮತ್ತು ಆಸ್ಪತ್ರೆಗಳ ಅಸ್ತಿತ್ವದಲ್ಲಿ ಕೊಂಡಜ್ಜಿಯವರ ಪ್ರಯತ್ನವಿರುವುದು ಎಲ್ಲರಿಗೂ ತಿಳಿದ ವಿಷಯ.

ಕೊಂಡಜ್ಜಿಯವರ ವ್ಯಕ್ತಿತ್ವದ ಯಾವೊಂದು ಮುಖವನ್ನು ನಾವು ಗಣನೆಗೆ ತೆಗೆದುಕೊಂಡರೂ ಉನ್ನತವಾಗಿದೆ. ಇವರು ಅಧಿಕಾರದಲ್ಲಿದ್ದಾಗ , ಅದರಿಂದ ಹೊರ ಬಂದಾಗ ಒಂದೇ ತೆರನಾದ ನಡವಳಿಕೆಯನ್ನುಳ್ಳವರಾಗಿದ್ದರು. ಅನೇಕ ವೇಳೆ ತಾವು ಅಧಿಕಾರ ಬಿಟ್ಟಾಗಲೇ ಜನ ಸಾಮಾನ್ಯರೊಡನೆ, ಆಪ್ತರಿಷ್ಟರೊಡನೆ ಹೆಚ್ಚು ಬೆರೆಯಲು, ಅನುಕೂಲವಾಗುತ್ತದೆ ಎನ್ನುತ್ತಿದ್ದರು. ಅವರು ಅಧಿಕಾರದಲ್ಲಿದ್ದಾಗ ಯಾರೊಬ್ಬರ ಮೇಲೂ ಇದರ ದರ್ಪವನ್ನು ತೋರಿಸಲಿಲ್ಲ. ಇದನ್ನು ಅವರೊಡನೆ ಕೆಲಸಮಾಡಿದ ಅಧಿಕಾರಿಗಳಿಂದ ,ನಿಕಟವರ್ತಿಗಳಿಂದ ತಿಳಿಯಬಹುದು. ಯಾರೇ ಆಗಲಿ ಒಮ್ಮೆ ಕೊಂಡಜ್ಜಿಯವರ ಸಂಪರ್ಕಕ್ಕೆ ಬಂದರೆಂದರೆ ಸಾಕ ಇವರ ಪರಿಪೂರ್ಣ ವ್ಯಕ್ತಿತ್ವದ ಸೆಳೆತಕ್ಕೆ ಸಿಕ್ಕು ಇಡೀ ಜೀವಮಾನದಲ್ಲೇ ಇವರನ್ನು ಮರೆಯುತ್ತಿರಲಿಲ್ಲ. ಇವರನ್ನು ಕಾಣಲು ಬಂದವರು ಅಧಿಕಾರಿಗಳಿರಲಿ ಮತ್ತು ಜನಸಾಮಾನ್ಯರಿರಲಿ ಎಲ್ಲರಿಗೂ ಸವಿಮಾತಿನ, ಕ್ಷೇಮಸಮಾಚಾರದ , ವೈಯಕ್ತಿಕ ತೊಂದರೆಗಳ ಬಗ್ಗೆ ವಿಚಾರಣೆಯಾದ ನಂತರ ಉಳಿದ ಕಾರ್ಯಗಳ ಬಗ್ಗೆ ವಿಚಾರಣೆ. ಅಧಿಕಾರಿಗಳಿಗೆ ಅವರು ಕೆಲಸಮಾಡುವಲ್ಲಿ ಅನೇಕ ತೊಡಕುಗಳಿರುತ್ತವೆಂಬುದನ್ನು ತಿಳಿದಿದ್ದ ಕೊಂಡಜ್ಜಿಯವರು ಅವರನ್ನು ''ನನಗೆ ಅದು ಮಾಡಿ, ಇದು ಮಾಡಿ'' ಎಂದು ಎಂದೂ ಪೀಡಿಸಲಿಲ್ಲ. ಸಾರ್ವಜನಿಕ ಆಡಳಿತದಲ್ಲಿ ಇದೊಂದು ಹೊಸ ಬಗೆಯ ಸಂಬಂಧ.ಹೀಗಾಗಿ ಅಧಿಕಾರಿಗಳಿಗೆ

ಯಾರು ಒಳ್ಳೆಯ ನಡತೆಯೆಂಬ ಹೊದಿಕೆ ಹೊಂದಿಲ್ಲವೋ ಅಂಥವರು ಬಟ್ಟೆತೊಟ್ಟಿದ್ದರೂ ಬೆತ್ತಲೆ ಇದ್ದಂತೆಯೇ - ಸೋಮದೇವ ನೀತಿಸೂತ್ರ.

ಇವರ ಬಗ್ಗೆ ಗೌರವ ಭಾವನೆ ಬೆಳೆಯುತ್ತಿತ್ತು. ಇದಕ್ಕೆ ನಿದರ್ಶನಗಳಿವೆ. ರಾಜ್ಯದಲ್ಲಿ ಸಚಿವರಾಗಿದ್ದಾಗ ಪ್ರವಾಸದ ಮೇಲೆ ಧಾರವಾಡಕ್ಕೆ ಬಂದಿದ್ದರು. ನಗರಕ್ಕೆ ಎಲ್ಲ ಸಚಿವರಂತೆ ಇವರನ್ನು ಪೋಲೀಸರು ನಿರೀಕ್ಷಣಾ ಮಂದಿರದಿಂದ ಗೌರವರಕ್ಷೆಯಲ್ಲಿ ಕರೆದುಕೊಂಡು ಹೋಗಿ ನಗರದ ಹೊರವಲಯದಲ್ಲಿ ಬಿಟ್ಟರು. ಆದರೆ ಇವರು ಮಾತ್ರ ಕಾರನ್ನು ನಿಲ್ಲಿಸಿ ತಮಗೆ ಈ ಗೌರವ ನೀಡಿದ ಇಬ್ಬರು ಇನ್ಸ್‌ಪೆಕ್ಟರ್‌ಗಳ ಕೈಕುಲಕಿದರಲ್ಲದೆ, ಅವರು ನೀಡಿದ ಈ ಗೌರವಕ್ಕೆ ಪೋಲೀಸ್ ಸೂಪರಿಂಟೆಂಡೆಂಟ್‌ರವರಿಗೂ ತಮ್ಮ ವಂದನೆಗಳನ್ನು ತಿಳಿಸುವಂತೆ ಹೇಳಿ ಮುಂದೆ ಹೋದರು. ಪೋಲೀಸ್ ವಲಯದಲ್ಲಿ ಇದೊಂದು ವಿಶೇಷ ಸುದ್ದಿಯಾಗಿ ಕೊಂಡಜ್ಜಿಯವರ ಬಗ್ಗೆ ಅವರೆಲ್ಲರಿಗೂ ಒಂದು ಗೌರವ ಭಾವನೆ ಮೂಡಿತು.

ಕೊಂಡಜ್ಜಿಯವರು ಅಧಿಕಾರಕ್ಕೆ, ಹಣಕ್ಕೆ, ಸ್ಥಾನಕ್ಕೆ ಬೆಲೆಕೊಡದೆ ಸಮಾಜ ಸೇವೆಗೆ, ನ್ಯಾಯಕ್ಕೆ ಮಹತ್ವ ನೀಡುತ್ತಾ ಬಂದಿದ್ದರು. ಇವರಿಗೆ ವೃಥಾ ಕಾಲಹರಣ ಮಾಡುವುದೆಂದರೆ ತಿಳಿಯದು ಮತ್ತು ಎಲ್ಲರೂ ತಮ್ಮ ಅಮೂಲ್ಯವಾದ ಕಾಲವನ್ನು ಸದುಪಯೋಗ ಪಡಿಸಿಕೊಳ್ಳಬೇಕೆಂಬುದು ಅವರ ಅಭಿಮತ. ಇಂದು ಸಾರ್ವಜನಿಕ ಜೀವನದಲ್ಲಿ ಅದರಲ್ಲೂ ಸಚಿವರಾದವರು, ದೊಡ್ಡ ದೊಡ್ಡ ಸ್ಥಾನದಲ್ಲಿರುವವರು ಸಭೆ-ಸಮಾರಂಭ ಗಳಿಗೆ, ಕೂಟಗಳಿಗೆ ಗಂಟೆಗಟ್ಟಲೇ ತಡವಾಗಿ ಬರುವುದು, ತಮಗಾಗಿ ಕಾಯುತ್ತಿರುವವರನ್ನು ಮಿತಿ ಮೀರಿ ಕಾಯುವಂತೆ ಮಾಡುವುದನ್ನು ಒಂದು ಘನತೆಯ ವಿಷಯವನ್ನಾಗಿ ಮಾಡಿಕೊಂಡಿದ್ದಾರೆ. ಆದರೆ ಕೊಂಡಜ್ಜಿಯವರು ಯಾವಾಗಲೂ, ಯಾವ ಕಾರ್ಯಕ್ರಮಕ್ಕೂ ತಡಮಾಡಿ ಬರುತ್ತಿರಲಿಲ್ಲ. ಒಂದು ವೇಳೆ ತಡವಾಗುವುದು ಕಂಡು ಬಂದಲ್ಲಿ ಈ ವಿಷಯವನ್ನು ತಮ್ಮ ಬರುವಿಗಾಗಿ ಕಾದಿರುವವರಿಗೆ ಅತ್ಯಂತ ಆಸ್ಥೆಯಿಂದ ಮುಂಚಿತವಾಗಿಯೇ ತಿಳಿಸಿಬಿಡುತ್ತಿದ್ದರು. ಸಚಿವರಾಗಿ ಪ್ರವಾಸ ಮಾಡುತ್ತಿದ್ದಾಗಲೂ ಅವರ ಅಧಿಕಾರಿಗಳು ವೃಥಾ ಬಂದು ತಮಗಾಗಿ ಕಾಯುವುದನ್ನು ಇಷ್ಟಪಡುತ್ತಿರಲಿಲ್ಲ. ಕೇಂದ್ರದಲ್ಲಿ ಸಚಿವರಾಗಿದ್ದಾಗ ಇವರು ಹುಬ್ಬಳ್ಳಿ ಮಾರ್ಗವಾಗಿ ಬೆಳಗಾಂಗೆ ಹೋಗಬೇಕಿತ್ತು. ಹುಬ್ಬಳ್ಳಿಯಲ್ಲಿ ಯಾವ ಅಧಿಕೃತ ಕಾರ್ಯಕ್ರಮವಿರಲಿಲ್ಲ. ಆದರೂ ಶಿಷ್ಟಾಚಾರದಂತೆ ಕಾಣಲು ಬಂದಿದ್ದ ಅಧಿಕಾರಿಗಳೊಡನೆ ಕೆಲವು ವಿಷಯಗಳ ಬಗ್ಗೆ ಚರ್ಚಿಸಿ ಅವರನ್ನು ಬೀಳ್ಕೊಡುವಾಗ ''ನಾನು ಬೆಳಿಗ್ಗೆ 8ಕ್ಕೆ ಇಲ್ಲಿಂದ ಬಿಡುತ್ತೇನೆ ನೀವಾರೂ ತೊಂದರೆ ತೆಗೆದುಕೊಂಡು ಬರುವುದು ಬೇಡ'' ಎಂದು ಸ್ಪಷ್ಟವಾಗಿ ಹೇಳಿ ಬಿಟ್ಟರು. ಆಗಾಗ ಬಂದು ಹೋಗುವ ಸಚಿವರನ್ನು ಕಾಯುತ್ತ ಹುಬ್ಬಳ್ಳಿ ಮುಂತಾದ ಪ್ರಮುಖ ನಗರದಲ್ಲಿಯ ಹಿರಿಯ ಅಧಿಕಾರಿಗಳು ಎಷ್ಟು ಕಾಲ, ಹಣ ಮತ್ತು ಶ್ರಮವನ್ನು ಪೋಲು ಮಾಡುತ್ತಾರೆನ್ನುವ ಕಲ್ಪನೆ ಸ್ವತಃ ಆಡಳಿತದ ಅನುಭವವಿದ್ದ ಶ್ರೀ ಕೊಂಡಜ್ಜಿಯವರಿಗೆ ಇದ್ದಿತು.

ಒಂದು ಸಾರಿ ಕೊಂಡಜ್ಜಿಯವರು ಬೆಳಗಾಂನಿಂದ ದಾವಣಗೆರೆಗೆ ಬರುತ್ತಿದ್ದಾಗ ಸಂಭವಿಸಿದ ಒಂದು ಪ್ರಸಂಗ ಇವರು ಪ್ರಚಾರ ಪ್ರಿಯರಲ್ಲ ಮತ್ತು ಇತರರ ಕಾಲಕ್ಕೂ ಎಷ್ಟು ಮಹತ್ವ ಕೊಡುತ್ತಾರೆನ್ನುವುದನ್ನು ತೋರಿಸುತ್ತದೆ. ಮಾರ್ಗಮಧ್ಯದಲ್ಲಿ ಇವರಿಗೆಂದು ಕೊಟ್ಟ ಸರ್ಕಾರಿ ಕಾರು ಕೆಟ್ಟು ನಿಂತು ಇದರ ರಿಪೇರಿಗೆ 2-3 ಗಂಟೆಗಳೇ ಬೇಕೆಂದು ಕಂಡು ಬಂದಾಗ ಆ ಮಾರ್ಗದಲ್ಲಿ ಹೋಗುವ ಯಾವುದಾದರೂ ವಾಹನದಲ್ಲಿ ಹೋದರಾಯಿತೆಂದು ನಿಲ್ಲಿಸಲು ಕೇಳಿದರು. ಕೆಲವರು ನಿಲ್ಲಿಸಲಿಲ್ಲ. ನಿಂತ ಕೆಲವು ವಾಹನಗಳಲ್ಲಿ ಜಾಗವಿರಲಿಲ್ಲ. ಕೊನೆಗೆ ಒಬ್ಬ ಲಾರಿಯವನು ಇವರನ್ನು ಕರೆದೊಯ್ಯಲು ಒಪ್ಪಿದನು. ದಾವಣಗೆರೆಯಲ್ಲಿ ಇವರ ಬರುವಿಗಾಗಿ ಕಾಯ್ದು ನಿಂತಿದ್ದ ಅಭಿಮಾನಿಗಳ ಮುಂದೆ ಲಾರಿಯಿಂದ ಕೊಂಡಜ್ಜಿಯವರು ಮತ್ತು ಅವರ ಶ್ರೀಮತಿಯವರು ಇಳಿದಾಗ ಅವರೆಲ್ಲರಿಗೂ ಆಶ್ಚರ್ಯವಾಯಿತು. ಇದಾವುದನ್ನೂ ತೋರಗೊಡದೇ ''ದಾರಿಯಲ್ಲಿ ಕಾರು ಕೆಟ್ಟು ನಿಂತಿತು, ನಿವೆಲ್ಲಾ ಕಾಯುತ್ತೀರೆಂದು ಲಾರಿಯಲ್ಲಿ ಬಂದು ಬಿಟ್ಟೆ'' ಎಂದು, ಲಾರಿಯವನಿಗೆ ವಂದಿಸಿ, ಜನರ ಗುಂಪಿನಲ್ಲಿ ಸೇರಿಕೊಂಡರು. ಸಚಿವರು ಲಾರಿಯಲ್ಲಿ ಮಾಡಿದ ಸುಮಾರು 60 ಮೈಲಿಗಳ ದೂರದ ಈ ಪ್ರವಾಸದ ಬಗ್ಗೆ ಎಲ್ಲೂ ಪ್ರಕಟವಾಗಿಲ್ಲ . ಈಗ ಇದನ್ನು ಓದುವವರಿಗೆ ಆಶ್ಚರ್ಯವಾಗಬಹುದು. ಆದರೆ ಕೊಂಡಜ್ಜಿಯವರು ಇಂಥ ಪ್ರಚಾರಗಳನ್ನು ಎಂದೂ ಬಯಸಿದವರಲ್ಲ.

ಸಚಿವರನ್ನು ಅಥವಾ ಅಧಿಕಾರದಲ್ಲಿರುವವರನ್ನು ಅನೇಕರು ಕಾಣಬರುತ್ತಾರೆ. ಮತ್ತು ಅವರ ಹಿನ್ನೆಲೆ ಮತ್ತು ಉದ್ದೇಶಗಳೂ ಭಿನ್ನವಿರುತ್ತವೆ. ಆದರೆ ಕೊಂಡಜ್ಜಿಯವರನ್ನು ಕಾಣಬರುವವರೆಲ್ಲ ಅವರ ಆತ್ಮೀಯರೆಂದು ಒಂದೇ ಗುಂಪು ಮಾಡಬಹುದು. ಏಕೆಂದರೆ ಇವರು ಅಧಿಕಾರಿಗಳು, ಸಂಬಂಧಿಕರು, ಸಹಕಾರಿಗಳು, ಸ್ನೇಹಿತರು ಹೀಗೆ ಎಲ್ಲರನ್ನೂ ಅವರು ಒಂದೇ ರೀತಿಯಲ್ಲಿ ಕಾಣುತ್ತಿದ್ದರು. ಎಲ್ಲರೊಡನೆಯೂ ಕುಶಲ ಸಂಭಾಷಣೆ, ಕ್ಷೇಮ ಸಮಾಚಾರ ವಿನಿಮಯ, ಮಕ್ಕಳ ವಿದ್ಯಾಪ್ರಗತಿ, ಹೀಗೆ ಅನೇಕ ಅಧಿಕಾರಿಗಳಿಗೆ ಇವು ಅಧಿಕೃತ ಸಂದರ್ಶನಗಳಿಗಿಂತ ವೈಯಕ್ತಿಕ ಸಂಬಂಧವಾಗುತ್ತಿದ್ದವು. ಕೊಂಡಜ್ಜಿಯವರು ಹೋಟೆಲುಗಳಲ್ಲಿ ಮುಂತಾದ ಕಡೆ ಊಟ-ತಿಂಡಿಗಳನ್ನು ತೆಗೆದುಕೊಳ್ಳುವುದಿಲ್ಲವೆಂದು ತಿಳಿದಿದ್ದ ಕೊಂಡಜ್ಜಿಯವರ ಅಪಾರ ಬಂಧು-ಬಳಗದವರು ಇವರಿಗಾಗಿ ಏನಾದರೊಂದು ವಿಶೇಷ ಮಾಡಿ ಕಾಯುತ್ತಿದ್ದರು. ಒಮ್ಮೆ ಇವರೊಡನೆ ಬೆಂಗಳೂರಿನಿಂದ ಬೆಳಗಾಂವರಿಗೆ ಪ್ರವಾಸ ಹೊರಟವರೊಬ್ಬರು ನಗುತ್ತಾ ''ಕೊಂಡಜ್ಜಿ ನೀವು ಯಾವ ನಕ್ಷತ್ರದಲ್ಲಿ ಹುಟ್ಟಿದ್ದೀ? ಹೋದಲೆಲ್ಲಾ ಉತ್ತಮ ಊಟ-ತಿಂಡಿಗೆ ಕೊರತೆ ಇಲ್ಲ. ಆದರೆ ನನ್ನಂಥವರಿಗೆ ತಿಂದೂ ತಿಂದೂ ಸಂಕಟಕ್ಕೆ ಬಂದಿದೆ''ಎಂದಾಗ ಎಲ್ಲರೊಡನೆ ಕೊಂಡಜ್ಜಿಯವರೂ ಮನಸಾರೆ ನಕ್ಕರಂತೆ.

ರಾಜಕೀಯದಂತೆ ಕೊಂಡಜ್ಜಿಯವರ ಜೀವನದುದ್ದಕ್ಕೂ ಅಂಟಿಕೊಂಡು ಬಂದ ಇನ್ನೊಂದು ನಂಟೆಂದರೆ ಯುವಜನ. ಸ್ಕೌಟ್ ಸಂಸ್ಥೆಯಲ್ಲಿ ಅಸಿಸ್ಟೆಂಟ್ ಜಿಲ್ಲಾ ಕಮೀಷನರ್ ಆಗಿ ಮುಂದೆ ಸ್ಟೇಟ್ ಛೀಫ್ ಕಮಿಷನರ್ ಆಗಿರುವ ಈವರೆಗೆ ಅವರು ಯುವಜನರೊಡನೆ ಬೆರೆಯುವುದು, ಅವರ ಕೈಲಾದ ಸೇವೆ ಮಾಡುವುದು ಇದ್ದವು. ಆಗ ಇಂಥ ಯಾವೊಂದು ಅವಕಾಶವನ್ನು ಇವರು ಕಳೆದುಕೊಳ್ಳಲಿಲ್ಲ. ಯುವಜನರೊಡನೆ ಇದ್ದಾಗ ಇವರಿಗೆ ತಮ್ಮ ವಯಸ್ಸಿನ, ಸ್ಥಾನದ ಅರಿವೇ ಮರೆತು ಹೋಗಿ ಅವರೊಡನೆ ತಾವೂ ಒಬ್ಬರಾಗಿಬಿಡುತ್ತಿದ್ದರು. 1973ರಲ್ಲಿ ಹುಬ್ಬಳ್ಳಿಯಲ್ಲಿ ನಡೆದ 13ನೇ ರಾಜ್ಯ ಮಟ್ಟದ ರ್‍ಯಾಲಿಯಲ್ಲಿ ಶ್ರೀ ಕೊಂಡಜ್ಜಿಯವರು ಮಾಡುತ್ತಿದ್ದ ಕಾರ್ಯಚಟುವಟಿಕೆಗಳನ್ನು ಕಂಡು ಅನೇಕರು ಬೆರಗಾದರು. ರ್‍ಯಾಲಿ ಪ್ರಾರಂಭವಾಗುವ ಒಂದು ದಿನ ಮೊದಲೇ ಬಂದು ಅದು ಮುಗಿದ ಮರು

ನಮ್ಮ ಅಂತರಂಗದ ಪುಸ್ತಕ ತೆರೆಯುವತನಕ, ಉಳಿದೆಲ್ಲ ಪುಸ್ತಕಗಳು ಉಪಯೋಗಕ್ಕೆ ಬಾರದು - ಸ್ವಾಮಿ ವಿವೇಕಾನಂದ.

ದಿನದವರೆಗೂ ಎಲ್ಲಿ ನೋಡಿದರೂ ಇವರದೇ ದರ್ಶನ, ಇವರದೇ ಮಾತು. ರ್‍ಯಾಲಿಯಲ್ಲಿ ನನಗೆ ಕೊಡಲಾಗಿದ್ದ ಒಂದು ಅಧಿಕಾರ ಸ್ಥಾನದಿಂದ ರಾತ್ರಿ ಎಲ್ಲರೂ ಮಲಗಿದ ನಂತರ ಮಲಗುವ ಮತ್ತು ಬೆಳಿಗ್ಗೆ ಎಲ್ಲರಿಗಿಂತಲೂ ಮುಂಚೆ ಏಳುವ ಜವಾಬ್ದಾರಿ ಇತ್ತು. ಆದರೆ ಯಾವ ದಿನವೂ ನನಗೆ ಈ ಹೆಮ್ಮೆ ಪಡುವ ಅವಕಾಶ ಸಿಗಲಿಲ್ಲ. ಏಕೆಂದರೆ ನಮ್ಮೆಲ್ಲರನ್ನೂ ಮಲಗಲು ಕಳುಹಿಸಿ, ನಂತರ ಕ್ಯಾಂಪಿನ ಎಲ್ಲಾ ಕಡೆ ಒಂದು ಸುತ್ತು ಹಾಕಿ ಬಂದ ನಂತರ ತಾವು ಮಲಗಲು ಹೋಗುತ್ತಿದ್ದರು. ನಾನು ಎಷ್ಟೇ ಬೇಗ ಎದ್ದಿದ್ದೇನೆಂದು ಹೊರಗೆ ಬಂದರೂ ಆಗಲೇ ಕೊಂಡಜ್ಜಿಯವರು ಅಲ್ಲಿ ಬಂದಿರುತ್ತಿದ್ದರು. ಇವರ ಈ ಪರಿಶ್ರಮ, ನಿಷ್ಠೆ ಯಾವ ತರುಣನನ್ನೂ ನಾಚಿಸುವಂತಹದು. ರ್‍ಯಾಲಿಯ ಅಂಗವಾಗಿ ಸುಮಾರು 4 ಸಾವಿರ ಜನ ಸ್ಕೌಟ್ ಮತ್ತು ಗೈಡ್‌ಗಳ 13 ಕಿ.ಮೀ. ಉದ್ದದ ಪಥಸಂಚಲನೆ ನಡೆದಿತ್ತು. ಹುಬ್ಬಳ್ಳಿಯ ಪ್ರಮುಖ ಬೀದಿಗಳಲ್ಲಿ ಹಾಯ್ದು ಬಂದ ಈ ದೂರವನ್ನು ಎಲ್ಲರೂ ನಡೆದೇ ಮುಗಿಸಿದರು. ಇಡೀ ದಿನ ವಣದಿದ್ದ ಕೊಂಡಜ್ಜಿಯವರಿಗೆ ಕಾರಿನಲ್ಲಿ ಬರಲು ಯಾರು ಎಷ್ಟು ಹೇಳಿದರೂ ಕೇಳದೆ ಮಕ್ಕಳ ಸಾಲಿನಲ್ಲಿ ನಡುವೆ ನಡೆಯುತ್ತಾ ಅವರನ್ನು ''ವೆಲ್ಡನ್, ವಂಡರ್‌ಫುಲ್, ಕಂಗ್ರಾಚ್ಯುಲೇಷನ್'' ಎಂದು ಹುರಿದುಂಬಿಸುತ್ತಾ ಓಡಾಡಿದ ರೀತಿ, ಎಂತವರಿಗೂ ಹುರುಪು ತರುವಂತಿತ್ತು. ಅಂದು ಕೊಂಡಜ್ಜಿಯವರ ಈ ಉತ್ಸಾಹಪೂರ್ಣ ಚಟುವಟಿಕೆಗಳನ್ನು ಕಂಡ ಹುಬ್ಬಳ್ಳಿ ಚೇಂಬರ್ ಆಫ್ ಕಾಮರ್ಸ್ ಅಧ್ಯಕ್ಷರಾಗಿದ್ದ ಶ್ರೀ ಆರ್.ಜಿ.ವಾಲಿಯವರು ''ಕೊಂಡಜ್ಜಿಯವರ ಈ ಉತ್ಸಾಹವನ್ನು ಕಂಡು ನಾವು ತರುಣರಂತಾಗಿದ್ದೇವೆ. ಕಣ್ಣಾರೆ ಕಂಡೆವೆಂದೇ ಇದನ್ನು ನಾವು ನಂಬಬೇಕು'' ಎಂದು ಕೊಂಡಾಡಿದರು.

ತೀರಾ ಇತ್ತೀಚೆಗೆ ಕೊಂಡಜ್ಜಿಯಲ್ಲಾದ ಒಂದು ದೊಡ್ಡ ಸಮಾರಂಭಕ್ಕೆ ಅನೇಕ ಸಚಿವರು ಬಂದಿದ್ದರು. ಅಂದು ಕೊಂಡಜ್ಜಿ ಸ್ಕೌಟ್ ಕ್ಯಾಂಪ್‌ನ ವಿವಿಧ ಕಟ್ಟಡಗಳ, ಅಂಗಣಗಳ ಉದ್ಘಾಟನೆ, ಶಂಕು ಸ್ಥಾಪನೆಗಳಿದ್ದವು. ಇವೆಲ್ಲದರ ಮೇಲ್ವಿಚಾರಣೆಯಲ್ಲಿ 1-2 ದಿನಗಳ ಮೊದಲಿನಿಂದಲೇ ಶ್ರಮಿಸಿದ್ದ ಕೊಂಡಜ್ಜಿಯವರು ಅಂದು ಇಡೀ ದಿನ ನಿಂತೇ ಇದ್ದರೆನ್ನಬೇಕು. ಅಂದಿನ ಕಾರ್ಯಕ್ರಮ ಮುಗಿಸಿಕೊಂಡು ನಾವೆಲ್ಲರೂ ಊಟದ ಮನೆಯತ್ತ ನಡೆದಾಗ ಅದಾವ ಮಾಯದಿಂದಲೋ ಕೊಂಡಜ್ಜಿಯವರು ಆಗಲೇ ಬಂದು ಅಲ್ಲಿ ಊಟದ ಮೇಲ್ವಿಚಾರಣೆ ನಡೆಸಿದ್ದರು.

ಕೊಂಡಜ್ಜಿಯವರು ತಮ್ಮ ಮೃದು ಸ್ವಭಾವಕ್ಕೆ ಹೆಸರಾಗಿದ್ದರು. ಅವರಿಂದ ಅವಾಚ್ಯ ಶಬ್ದಗಳು ಬಂದಿದ್ದನ್ನು ನಾನಂತೂ ಕೇಳಲಿಲ್ಲ. ತಮ್ಮ ವೈಯಕ್ತಿಕ ಮತ್ತು ಸಾರ್ವಜನಿಕ ವ್ಯವಹಾರದಲ್ಲಿ ಅವರು ಎಂದೂ ಸಂಯಮವನ್ನು ಕಳೆದುಕೊಂಡವರಲ್ಲ. ಈ ಒಂದು ಅಮೂಲ್ಯ ಗುಣವನ್ನು ಇವರ 'ಅಸಹಾಯಕತೆ' ಎಂದು ತಿಳಿದವರೂ ಇದ್ದಾರೆ. ಸಾಮಾನ್ಯವಾಗಿ ಶ್ರೀ ಕೊಂಡಜ್ಜಿಯವರು ಯಾವಾಗಲೂ ಯಾರ ಮೇಲೂ ತಮ್ಮ ಅಧಿಕಾರ ಮತ್ತು ದರ್ಪ ಹೇರಲು ಹೋದವರಲ್ಲ. ಆದರೆ ಅನ್ಯಾಯವಾದೆಡೆ ಅವರು ನಿರ್ದಾಕ್ಷಿಣ್ಯವಾಗಿ ನಡೆದು ಕೊಂಡಿರುವುದನ್ನು ನಾನು ಕಂಡಿದ್ದೇನೆ.

ಸಾಮಾನ್ಯವಾಗಿ ಕೊಂಡಜ್ಜಿಯವರು ತಮ್ಮ ದೈಹಿಕ ಆರೋಗ್ಯದ ಜೊತೆಗೆ ಮಾನಸಿಕ ಆರೋಗ್ಯವನ್ನೂ ಉತ್ತಮವಾಗಿ ಕಾಪಾಡಿಕೊಂಡು ಬಂದಿದ್ದರು. ಅವರಿಗೆ ರಾಜಕೀಯ ಜೀವನದಲ್ಲಾದ ಏರು-ಪೇರುಗಳು ಮತ್ತಾರಿಗಾದರೂ ಬಂದಿದ್ದರೆ ಅವರು ನಿಜವಾಗಿಯೂ ಧೃತಿಗೆಟ್ಟು ಹೋಗಿರುತ್ತಿದ್ದರು. ಆದರೆ ಇಂತಹ ಏರುಪೇರುಗಳಾವುದೂ ಕೊಂಡಜ್ಜಿಯವರ ಮೇಲೆ ಪರಿಣಾಮವನ್ನು ಮಾಡಲಿಲ್ಲ. ಇವರು ಯಾವ ವಿಷಯಕ್ಕೂ ತಲೆ ಬಿಸಿಮಾಡಿಕೊಂಡವರಲ್ಲ , ಎಂದೂ ಆಸೆ - ಆಕಾಂಕ್ಷೆಗಳನ್ನು ಹೊತ್ತು ತಮ್ಮ ಕೆಲಸ ಕಾರ್ಯಗಳನ್ನು ಪ್ರಾರಂಭಿಸಿದವರಲ್ಲ. ಆದ್ದರಿಂದ ಕೈಗೊಂಡ ಅನೇಕ ಕಾರ್ಯಗಳು ಕೈಗೂಡದಾಗಲೂ ಇವರಿಗೆ ವ್ಯಥೆ, ನಿರಾಶೆಯಾಗಲಿಲ್ಲ. ಹೀಗಾಗಿ ಇವರು ಗಳಿಸಿದ ಅನೇಕ ಅಧಿಕಾರ-ಘನತೆಗಳು ಇವರ ಬೆನ್ನಟ್ಟಿ ಬಂದವುಗಳೇ ವಿನಾ ಇವರಾಗಿ ಅವುಗಳ ಬೆನ್ನು ಹತ್ತಲಿಲ್ಲ. ಹೀಗೆ ನಾಡಿನ ಸೇವೆಯನ್ನೇ ಗುರಿಯಾಗಿಟ್ಟುಕೊಂಡು ತಮ್ಮ ಜೀವನವನ್ನೇ ಸವೆಸಿದ ಕೊಂಡಜ್ಜಿಯವರು ತಾವು ಅಲಂಕರಿಸಿದ ಯಾವ ಸ್ಥಾನದಿಂದಲೂ ವೈಯಕ್ತಿಕವಾಗಿ ಏನನ್ನೂ ಪಡೆಯಲಿಲ್ಲ. ಮಾತ್ರವಲ್ಲ ಈ ಅನೇಕ ಸ್ಥಾನಗಳಿಗೆ ಇವರಿಂದಲೇ ಗೌರವ ಬಂದಿತೆನ್ನಬಹುದು. ಶ್ರೀ ಪಾಟೀಲ್ ಪುಟ್ಟಪ್ಪನವರು ಹೇಳುವಂತೆ ಕೊಂಡಜ್ಜಿಯವರು ''ಬಂಗಾರ ಬೆಳ್ಳಿ ಬಟ್ಟೆಯಲ್ಲಿ ಹಾಯ್ದು ಬಂದರೂ ಬೆತ್ತಲೆಯಾಗಿ ಬರುವ ಸೂಜಿಯಂತೆ'' ತಮ್ಮ ಅಧಿಕಾರ ಸ್ಥಾನಗಳಿಂದ ಸ್ವಪ್ರಯೋಜನ ಅಥವಾ ಕಳಂಕವನ್ನು ಪಡೆಯದೆ ಪರಿಶುದ್ಧರಾಗಿ ಹೊರಬಂದಿದ್ದರು''. ●

## ಶಾಂತಿ ಮಂತ್ರ

ಮನದಲ್ಲಿ ಶಾಂತಿ,
ಮನೆಯಲ್ಲಿ ಶಾಂತಿ,
ಎಲ್ಲೆಲ್ಲೂ ಶಾಂತಿ,
ಎಲ್ಲರಲ್ಲೂ ಶಾಂತಿ,
ಸಮುದಾಯದಲ್ಲಿ ಶಾಂತಿ,
ದೇಶದಲ್ಲಿ ಶಾಂತಿ,
ಎಲ್ಲೆಲ್ಲೂ ಶಾಂತಿ,
ಎಲ್ಲರಲ್ಲೂ ಶಾಂತಿ,
ರಾಷ್ಟ್ರ ರಾಷ್ಟ್ರಗಳಲ್ಲಿ ಶಾಂತಿ,
ವಿಶ್ವದಲ್ಲಿ ಶಾಂತಿ,
ಎಲ್ಲೆಲ್ಲೂ ಶಾಂತಿ,
ಎಲ್ಲರಲ್ಲೂ ಶಾಂತಿ.
"ಸದ್ವಿಚಾರದಿಂದ ಸನ್ಮತಿಯೆಡೆಗೆ,
ಸನ್ಮತಿಯಿಂದ ಶಾಂತಿಯೆಡೆಗೆ,
ಶಾಂತಿಯಿಂದ ಪ್ರಗತಿಯೆಡೆಗೆ
ಸಾಗೋಣ" ●

ನಾವು ನಮ್ಮ ಕಾರ್ಯಗಳನ್ನು ತೀರ್ಮಾನಿಸುತ್ತೇವೆ, ಅವು ನಮ್ಮ ಯೋಗ್ಯತೆಯನ್ನು ತೀರ್ಮಾನಿಸುತ್ತವೆ - ಈಲಿಯಟ್



# ಅವಿಸ್ಮರಣೀಯ ದಿವ್ಯ ಚೇತನ ಶಿಬಿರಗಳು

ಶ್ರೀ ಎಂ.ಪಿ. ಚಂದ್ರಪ್ಪ
ಜಿಲ್ಲಾ ಉಪಾಧ್ಯಕ್ಷರು, ದಕ್ಷಿಣ ವಲಯ, ಭಾರತ್
ಸ್ಕೌಟ್ ಮತ್ತು ಗೈಡ್ ಮತ್ತು
ಜಿಲ್ಲಾ ಕ.ಸಾ.ಪ. ಕಾರ್ಯದರ್ಶಿ, ದಾವಣಗೆರೆ.

ನಿಸರ್ಗದ ಒಲವು ಮೂಡಿಸಿ ಸ್ಥಿರವಾಗಿ ಅಭಿವೃದ್ಧಿ ನೆಲೆಸಲು ಪ್ರಕೃತಿಯ ವಿಶಿಷ್ಟ ಪ್ರಗತಿಗೆ ಮಕ್ಕಳಲ್ಲಿ ಹುಟ್ಟಿ ಬಂದ ಶಿಕ್ಷಣವೇ ಸ್ಕೌಟ್ಸ್ ಮತ್ತು ಗೇಡ್ಸ್ ಇಂತಹ ಕಾರ್ಯಕ್ಕಾಗಿಯೇ ಜನಿಸಿದ ಮಹಾ ದಿವ್ಯ ಚೇತನವೇ ಸನ್ಮಾನ್ಯ ಶ್ರೀ ದಿವಂಗತ ಕೊಂಡಜ್ಜಿ ಬಸಪ್ಪನವರು.

ಮನೆ ನೋಡಾ ಬಡವರು। ಮನ ನೋಡಾ ಸಂಪನ್ನರು।
ಧನ ನೋಡಾ ಬಡವರು । ಘನಮನ ಸಂಪನ್ನರು ।
ಕೂಡಲ ಸಂಗನ ಶರಣರು । ಕರುಳಿಲ್ಲದ ಕಲಿಗಳು
ಆರಿಗೂ ಉಪಮಿಸಬಾರದು ॥

- ಬಸವಣ್ಣ

ಪ್ರಭುದೇವರ ಮಾತು ನಿಜ - ಎತ್ತಣ ಮಾಮರ ಎತ್ತಣ ಕೋಗಿಲೆ। ಸಮುದ್ರದೊಳಗಣ ಉಪ್ಪು ಬೆಟ್ಟದ ಮೇಲಿನ ನೆಲ್ಲಿಕಾಯಿ, ಎತ್ತಣೆಂದೆತ್ತಣ ಸಂಬಂಧ । ಹಾಗೆಯೇ ಕೊಂಡಜ್ಜಿ ಬಸಪ್ಪನವರಿಗೂ ಸ್ಕೌಟ್ಸ್ ಮತ್ತುಗೈಡ್ಸ್‌ಗೂ ಎತ್ತಣೆಂದೆತ್ತಣ ಸಂಬಂಧ? ಮಾಮರ-ಕೋಗಿಲೆಗಳ ಸಂಬಂಧಕ್ಕೆ ವಸಂತ ಋತು ಕಾರಣವಾದಂತೆ, ನೆಲ್ಲಿಕಾಯಿ-ಉಪ್ಪುಗಳ ಸಂಬಂಧಕ್ಕೆ ಉಪ್ಪಿನಕಾಯಿ ಗಡಿಗೆ ಕಾರಣವಾದಂತೆ, ಕೊಂಡಜ್ಜಿ ಬಸಪ್ಪವರಿಗೂ, ಸ್ಕೌಟ್ಸ್ ಮತ್ತುಗೈಡ್ಸ್‌ಗೆ ಮಧುರ ಸಂಬಂಧಕ್ಕೆ ದಿವ್ಯ ಚೇತವನೇ ದಿವ್ಯ ಚೇತವನೇ ಶ್ರೀ ಕೊಂಡಜ್ಜಿ ಬಸಪ್ಪನವರು.

ನಕ್ಷತ್ರ ಆಕಾಶದಲ್ಲಿ ಪ್ರಜ್ವಲಿಸುವಂತೆ ಮೂಡಿ ಬಂದ ನಕ್ಷತ್ರವೇ ಕೊಂಡಜ್ಜಿ ಬಸಪ್ಪನವರು. ಹುಟ್ಟಿದ್ದು 1915ರ ಡಿಸೆಂಬರ್‌ರಂದು, ಪ್ರಾಥಮಿಕ ಶಿಕ್ಷಣ ಹುಟ್ಟೂರು ಕೊಂಡಜ್ಜಿ. ಇಂಗ್ಲೀಷ್ ಲೋಯರ್ ಸೆಕೆಂಡರಿ ಮಲೇಬೆನ್ನೂರಿನಲ್ಲಿ. ದಾವಣಗೆರೆಯಲ್ಲಿ ಎಸ್.ಎಸ್.ಎಲ್.ಸಿ., 1934ರಲ್ಲಿ ಇಂಟರ್ ಮೀಡಿಯಟ್ 1936ರಲ್ಲಿ, ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ 1938ರಂದು ಬಿ.ಎಸ್.ಸಿ. ಪದವಿ, ಎಲ್.ಎಲ್.ಬಿ. ಪದವಿ 1940ರಲ್ಲಿ ಪೂನಾದ ಲಾ ಕಾಲೇಜಿನಲ್ಲಿ , 1942ರಲ್ಲಿ ವಕೀಲ ವೃತ್ತಿಯನ್ನು ಪ್ರಾರಂಭಿಸಿದರು.

ಮನೋಭೂಮಿಕೆಗೆ ಉತ್ತಮ ಗುಣಧರ್ಮದ ತರಬೇತಿ ನೀಡುವಂಥ, ನಡೆನುಡಿಗಳ ಸಪ್ಪಳಕೆಯ ಜ್ಞಾನದ ವೈಚಾರಿಕತೆಗೆ ನೀತಿಯ ನೆಲಗಟ್ಟನ್ನೊದಗಿಸುವ ಸುಖ-ದುಃಖಗಳನ್ನು ಎದುರಿಸುವ ನೈತಿಕತೆಯನ್ನು ನೀಡುವಂಥ ದಿಟ್ಟತನದ ಅಪರೂಪದ ಸಂಸ್ಥೆ ದಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್.

ಇದು ವಿಶ್ವವ್ಯಾಪಿ, ವಿಶ್ವದ 216 ರಾಷ್ಟ್ರಗಳಲ್ಲಿ ಹಾಗೂ ಪ್ರಾಂತ್ಯಗಳಲ್ಲಿ 28 ದಶಲಕ್ಷಕ್ಕೂ ಹೆಚ್ಚು, ಸ್ತ್ರೀ ಪುರುಷರು ಭೇದವಿಲ್ಲದೆ, ಹುಡುಗ ಹುಡುಗಿಯರೂ , ಕಿರಿಯರೂ, ಹಿರಿಯರೂ ಸ್ಕೌಟ್ಸ್ ಮತ್ತು ಗೈಡ್ಸ್ ಚಳವಳಿಯ ವಾಹಿನಿಗೆ ಸೇರಿ ಸೇವೆ ಸಲ್ಲಿಸಲು ಕಂಕಣಬದ್ದರಾಗಿ ವಿಶ್ವದ 151 ದೇಶಗಳಲ್ಲಿ ಅಂತರಾಷ್ಟ್ರೀಯ ಮನ್ನಣೆ ಪಡೆದ ರಾಷ್ಟ್ರೀಯ ಸಂಸ್ಥೆಗಳಿವೆ.

ಇಂಗ್ಲೇಂಡಿನಲ್ಲಿ ಹುಟ್ಟಿದ್ದು ಇದರ ಪ್ರವರ್ತಕ ಲಾರ್ಡ್ ಬೇಡನ್ ಪೊವೆಲ್ ಇವರ ಪೂರ್ತಿ ಹೆಸರು ಸ್ಟೀಫನ್‌ಸನ್ ಸ್ಮಿತ್ ಬೇಡಿನ್ ಆಫ್ ಗಿಲ್‌ವಿಲ್ ಪೊವೆಲ್. ಇವರು ಕ್ರಿ.ಶ. 1857ರಲ್ಲಿ ಲಂಡನ್ ಮಹಾನಗರದಲ್ಲಿ ಹುಟ್ಟಿ , ತನ್ನ 19ನೇ ವಯಸ್ಸಿನಲ್ಲೇ ಸೈನ್ಯ ಸೇರಿ ತಮ್ಮ ಧೈರ್ಯ, ಸಾಹಸ ಕಾರ್ಯದಕ್ಷತೆಗಳಿಂದ ಎಲ್ಲರ ಗಮನ ಸೆಳೆದರು. ಇವರ ಜನಪ್ರಿಯತೆಯಿಂದಾಗಿ 1907ರಲ್ಲಿ ಸ್ಕೌಟ್ಸ್ ಸಂಸ್ಥೆ ಸ್ಥಾಪನೆಯಾಯಿತು.

ಇಂಗ್ಲೆಂಡಿನಲ್ಲಿ ಪ್ರಾರಂಭವಾದ ಎರಡು ವರ್ಷಗಳ ಅಲ್ಪ ಸಮಯದಲ್ಲೇ ಅಂದರೆ 1909ರಲ್ಲಿ ಭಾರತದಲ್ಲಿ ಸ್ಥಾಪನೆಯಾಯಿತು. ಅಧಿಕೃತವಾಗಿ ಭಾರತದಲ್ಲಿ ಸ್ಕೌಟ್ ಚಳುವಳಿ 1917ರ ಮಾರ್ಚ್ 21ರಂದು. ಭಾರತಕ್ಕೆ ಸ್ವಾತಂತ್ರ 1947ರಲ್ಲಿ ಬಂದ ನಂತರ ಅನೇಕ ಸಂಘಟನೆಗಳಿದ್ದ ಸ್ಕೌಟ್ಸ್ ಸಂಸ್ಥೆ ಒಂದೇ ಆಗಬೇಕೆಂದು ನಿರ್ಧರಿಸಿ ಆ ನಿರ್ಧಾರದ ನಿರ್ಣಯವೇ 1950 ಅಕ್ಟೋಬರ್ 24ರಂದು ರೂಪಗೊಂಡ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮಹಾಸಂಸ್ಥೆ.

ದಾವಣಗೆರೆಯಲ್ಲಿ ವಕೀಲ ವೃತ್ತಿಗೆ ತೊಡಗಿದ್ದು , ಆಗ ಅಸಿಸ್ಟೆಂಟ್ ಕಮಿಷನರ್ ಆಗಿದ್ದ ಶ್ರೀ ಬಿ. ಬೀರಪ್ಪ ಅವರು ಭಾರತ ಸ್ಕೌಟ್ಸ್ ಮತ್ತು ಗೈಡ್ಸ್‌ನ ಸಂಸ್ಥೆಯ ದಾವಣಗೆರೆ ಸಂಸ್ಥೆಯ ಅಧ್ಯಕ್ಷರಾಗಿದ್ದ ಅವರಿಗೆ ಸಕ್ರಿಯ ಸಹಾಯಕರಾಗಿದ್ದು , 1950 ರಿಂದ 1960ರವರೆಗೆ ಜಿಲ್ಲಾ ಕಮಿಷನರ್ ಆಗಿ ಅಲ್ಲಿಂದ ಕೊನೆಯುಸಿರಿರುವರೆಗೂ ಅನೇಕ ಪದವಿಗಳಲ್ಲಿ ನಿಸ್ವಾರ್ಥ ಸೇವೆ ಸಲ್ಲಿಸಿದ ದಿವ್ಯ ಚೇತನ ಶಕ್ತಿ , ಅವಿಸ್ಮರಣೀಯ ಸನ್ಮಾನ್ಯ ದಿವಂಗತ ಶ್ರೀ ಕೊಂಡಜ್ಜಿ ಬಸಪ್ಪನವರು. ಇವರ ಮುಂದಾಳತ್ವದಲ್ಲಿ ಇಡೀ ಕರ್ನಾಟಕ ರಾಜ್ಯಕ್ಕೆ ಚಾಲನೆ ಮತ್ತು ಚೇತನ ಶಕ್ತಿಹೊರ ಹೊಮ್ಮಿದ ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್ ಮತ್ತು ಗಮನಾರ್ಹವಾದ ದಾವಣಗೆರೆ ಜಿಲ್ಲೆ ಕೊಂಡಜ್ಜಿ ಶಿಬಿರ ಕೇಂದ್ರ ಸ್ಥಾಪನೆಗಳಾದವು. ಇವು ಅತ್ಯಂತ ಸುಸಜ್ಜಿತ ಕೇಂದ್ರ ಸ್ಥಳಗಳಾಗಿವೆ.

## ಬೆಸೆಂಟ್ ಪಾರ್ಕ್ ಶಿಬಿರ

ಕರ್ನಾಟಕ ರಾಜ್ಯದ ರಾಜಧಾನಿಯಾದ ಬೆಂಗಳೂರಿಗೆ ಸಮೀಪದಲ್ಲಿರುವ ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್, ಪ್ರಕೃತಿಯ ಮಧ್ಯ ಅರಣ್ಯದಲ್ಲಿ ಉತ್ತಮ ಪರಿಸರದ ನಿಸರ್ಗ ಪ್ರೇಮದಿಂದ ಕೂಡಿದ ಮಡಿಲಿನಲ್ಲಿ ಬೆಸೆಂಟ್ ಪಾರ್ಕ್ ಪ್ರಶಾಂತ ವಾತಾವರಣದ, ಪರಿಶುದ್ದವಾದ ತರಬೇತಿ ಕೇಂದ್ರ. ಸುಸಜ್ಜಿತ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ. ಇಲ್ಲಿ ಶಾಲಾ ಕಾಲೇಜುಗಳಿಂದ ಹಿಡಿದು ಅಂತರಾಷ್ಟ್ರೀಯ ಶಿಬಿರಗಳನ್ನು ಒಳಗೊಂಡ ಹೆಮ್ಮೆಯ ಬೆಸೆಂಟ್ ಪಾರ್ಕ್. ಇದರ ವೈಭವದ ನೋಟ ಹೀಗಿದೆ.

1000 ಜನಕ್ಕೆ ಬಿಡಾರದ ಟೆಂಟುಗಳು, ಕೋಣೆಗಳ ಅತಿಥಿ ಗೃಹ,

ಕಠಿಣವಾದ ದುಡಿಮೆಯ ಹೊರತಾಗಿ, ಗೆಲುವಿಗೆ ಇನ್ನಾವುದೇ ದಾರಿ ಇಲ್ಲ - ಇ.ಟರ್ನರ್.

ಸಿಬ್ಬಂದಿ ಕೋಣೆಗಳು, ವಿಶಾಲವಾದ ವಿರಾಮ ಶಾಲೆ, ಧ್ವಜಸ್ತಂಭ ಮತ್ತು ವಂದನಾ ಕ್ಷೇತ್ರ, ನಕ್ಷತ್ರ ವೀಕ್ಷಣಾ ಗೋಪುರ, ಶ್ರವಣ-ದೃಶ್ಯ ಕೊಠಡಿ, ವಿಶಾಲ ಆಟದ ಮೈದಾನ, ಮರದ ಕುಟೀರಗಳು, ಗಾಂಧಿ ಭವನ, ಬೇಡಿನ್ ಪೊವೆಲ್ ಭವನ, ಎಸ್.ನಿಜಲಿಂಗಪ್ಪ ರಜತ ಮಹೋತ್ಸವ ಭವನ, ಪ್ರೊ. ಪಿ. ಶಿವಶಂಕರ್ ಗ್ರಂಥಾಲಯ, ಕಂಠೀರವ ಭವನ, ಕೆ.ವಿ.ಅನಂತರಾಮನ್ ವೃತ್ತ, ವಿ.ಪಿ.ದೀನದಯಾಳು ನಾಯ್ಡು ಸಭಾಭವನ, ಡಾ|| ಸೆಲ್ವಿದಾಸ್‌ರವರ ಸಂಸತ್ ನಿಧಿಯಿಂದ ನಿರ್ಮಿತ ಅಡಿಗೆ ಮನೆ ಮತ್ತು ಭೋಜನಾಲಯ, ಪಂಚವಟಿ ಶಿಬಿರಸ್ಥಾನ, ಜೆ.ಬಿ. ಮಲ್ಲಾರಾಧ್ಯ ಬಯಲು ರಂಗಮಂದಿರ, ಪ್ರೊ|| ಪಿ.ಶಿವಶಂಕರ ಶಿಬಿರಾಗ್ನಿ ವೃತ್ತ, ಕವಾಯತು ಮೈದಾನ ಪ್ರವಚನಾ ವೃತ್ತ, ನ್ಯಾಯಮೂರ್ತಿ ಕೆ.ಶಂಕರನಾರಾಯಣ ರಾವ್ ಈಜುಕೊಳ.

### ಕೊಂಡಜ್ಜಿ ಶಿಬಿರ

ಜಿಲ್ಲಾ ಕೇಂದ್ರವಾದ ದಾವಣಗೆರೆಗೆ ಕೊಂಡಜ್ಜಿ 14 ಕಿ.ಮಿ.ದೂರದ ಪುಟ್ಟಹಳ್ಳಿ . 1971ರಲ್ಲಿ ರಾಜ್ಯ ಸರ್ಕಾರ ನೀಡಿದ ಅಂಕು ಡೊಂಕಿನಿಂದ, ತಗ್ಗು ಉಬ್ಬುಗಳಿಂದ ಕೂಡಿದ ಗುಡ್ಡ , ಸನ್ಮಾನ್ಯ ಶ್ರೀ ದಿವಂಗತ ಶ್ರೀ ಕೊಂಡಜ್ಜಿ ಬಸಪ್ಪನವರ ಕನಸು ನನಸಾಗಿ ಹಚ್ಚ ಹಸುರಿನ ವೃಂದಾವನದ ವೈಭವವನ್ನು ಮತ್ತು ತುಂಗಾಭದ್ರಾ ನದಿಯನ್ನು ನಾಚಿಸುವ ಒಂದು ಭವ್ಯ ಕೆರೆ, ಇದರ ಮಡಿಲಲ್ಲಿ ಕಂಗೊಳಿಸುವ ಕೊಂಡಜ್ಜಿ ಶಿಬಿರ.

ಬಾಗಿಲೊಳು ಕೈ ಮುಗಿದು ಬಾ ಒಳಗೆ ಶಿಬಿರಾರ್ಥಿಯ ಎನ್ನುವಂತೆ ಕಾಣುವ ಪ್ರೇಕ್ಷಣೀಯ ನೋಟ. ಶ್ರೀ ಆಂಜನೇಯ ದೇವರ ದರ್ಶನ, ಕಲ್ಯಾಣ ಮಂಟಪ, ಮೀನು ಸಾಕಣೆ ಕೇಂದ್ರ, ಕೊಂಡಜ್ಜಿ ಬಸಪ್ಪನವರ ಸಮಾಧಿ, ಕೊಂಡಜ್ಜಿ ಬಸಪ್ಪನವರ ಪ್ರತಿಮೆ, ರತ್ನಮ್ಮ ಧರ್ಮರತ್ನಾಕರ ರಾಜನಹಳ್ಳಿ ಮದ್ದೂರಾಯಪ್ಪ ಸ್ಕೌಟ್ ಮತ್ತು ಗೈಡ್ ಭವನ, ಶಾಮನೂರು ಕಲ್ಲಪ್ಪ ಸಾವಿತ್ರಮ್ಮ ಆಡಳಿತ ಭವನ, ರಾಜ್ಯ ಸಭಾ ಸದಸ್ಯರಾಗಿದ್ದ ಶ್ರೀ ಕೆ.ಆರ್. ಜಯದೇವಪ್ಪನವರ ಸಂಸತ್ ನಿಧಿಯಿಂದ ನಿರ್ಮಿತ ತರಬೇತಿ ಕೊಠಡಿಗಳು, ಮೇಜರ್ ಎಂ.ಆರ್. ನಾರಾಯಣ ಸಿಂಗ್, ಅಡುಗೆ ಮನೆ, ಕೇಸರಿ ಗ್ರಂಥ ಭಂಡಾರ ಮತ್ತು ವಾಚನಾಲಯ, ಶ್ರೀ ಜಚ ಚಾಮರಾಜ ಒಡೆಯರ್ ಪ್ಲೇವುಡ್ ಕುಟೀರಗಳು, ಕೊಂಡಜ್ಜಿ ಬಸಪ್ಪ ಸಮುದಾಯ ಪ್ರಾರ್ಥನಾ ಮಂದಿರ, ಜಯಣ್ಣ ಎಂ. ಚಿಗಟೇರಿ ಅಷ್ಟಾಂಗಣ ಗೋಪುರ, ಸುರಕ್ಷಿತ ಕುಡಿಯುವ ನೀರಿನ ಟ್ಯಾಂಕ್, ಇಳಕಲ್ ಸಂಗಪ್ಪ ಪಾರ್ವತಮ್ಮ ಅಡುಗೆ ಮನೆ ಮತ್ತು ಭೋಜನ ಶಾಲೆ, ಹರಿಹರ ಪಾಲಿಫೈಬರ್ಸ್ ಈಜುಕೊಳ, ಶೌಚಾಲಯ ಮತ್ತು ಸುಲಭ ಶೌಚಾಲಯ ಎ.ಡಿ. ಆನಂದನ್ ಕವಾಯಿತು ಮೈದಾನ.

ನಿಸರ್ಗ ಸುಂದರ ಸನ್ನಿವೇಶದಲ್ಲಿರುವ ಕೊಂಡಜ್ಜಿ ಶಿಬಿರ ಕೇಂದ್ರವು ಮತ್ತು ದೊಡ್ಡ ಬಳ್ಳಾಪುರ ಬೆಸೆಂಟ್ ಪಾರ್ಕ್ ಕೇಂದ್ರಗಳು ರಾಷ್ಟ್ರದ ಪ್ರಮುಖ ಸ್ಕೌಟ್ಸ್ ಮತ್ತು ಗೈಡ್ಸ್ ಶಿಬಿರ ಕೇಂದ್ರಗಳು ವಿಕಾಸಗೊಂಡು ಚಿರಕಾಲ ಮಕ್ಕಳ ಮನಸ್ಸಿನಲ್ಲಿರುವ ಮಿನುಗುವ ನಕ್ಷತ್ರಗಳಂತೆ ಸ್ಕೌಟ್ ಮತ್ತು ಗೈಡ್ ಅವಿಸ್ಮರಣೀಯ ದಿವ್ಯ ಚೇತನ ಶಕ್ತಿ.

## ನಗುವಿನ ಬಗೆಗಳು

ಗೆದ್ದರೂ ನಗದವನು - ಕರ್ಮಯೋಗಿ

ನಕ್ಕು ನಗಿಸುತ ಮನೋರಂಜನೆ ನೀಡುವಾತ - ಹಾಸ್ಯಗಾರ

ನಗುನಗುತಾ ಜಯ ಸಾಧಿಸುವಾತ - ಬುದ್ಧಿವಂತ

ಇನ್ನೊಬ್ಬರನ್ನು ಕಂಡು ನಗುವಾತ - ಗರ್ವಿಷ್ಠ

ಇನ್ನೊಬ್ಬರಿಗೆ ನೋವಾಗುವಂತೆ ನಗುವವನು - ಖಳನಾಯಕ

ಇನ್ನೊಬ್ಬರಿಗಾಗಿ ನಗುವವನು - ಅಯೋಗ್ಯ

ತಾನೇ ತಾನಾಗಿ ನಗುವವನು - ಹುಚ್ಚ

ತನ್ನೊಳಗೆ ನಗುವವನು - ಜ್ಞಾನಿ

ತನ್ನನ್ನು ಮೈಮರೆತು ನಗುವವನು - ರಸಿಕ

ತನ್ನ ಗೆಳತಿಯನ್ನು ನೆನೆದು ನಗುವವನು - ಪ್ರೇಮಿ



# ಪರಿಸರ - ಆಪತ್ತು - ಪರಿಹಾರ

ಗೊ.ರು.ಚನ್ನಬಸಪ್ಪ
ಅಧ್ಯಕ್ಷರು,
ರಾಜಭಾಷಾ ಆಯೋಗ
ಕರ್ನಾಟಕ ಸರ್ಕಾರ

ಜೀವಿಗಳ ಜಗತ್ತು-ಭೂಗ್ರಹ. ಸೃಷ್ಠಿಯ ಕೌತುಕದ ನೆಲೆಯಾದ ಈ ಜಗತ್ತಿನ ಸೌಂದರ್ಯದ ಸಂಪತ್ತಾದ ಈ ಭೂಗ್ರಹದ ಇಂದಿನ ಪರಿಸ್ಥಿತಿ ಕುರಿತು ಹಸಿರಿನ ಹರಿಕಾರ ಎಂದು ಹೆಸರಾಗಿರುವ ಸುಂದರಲಾಲ್ ಬಹುಗುಣ ಒಂದು ಗಂಭೀರವಾದ ಮಾತು ಹೇಳಿದ್ದಾರೆ.

''ನಿಸರ್ಗದ ತೋಟ್ಟಿಲಲ್ಲಿ ದೇವರು ಮಾನವನನ್ನು ಸೃಷ್ಠಿಸಿದ. ಆದರೆ ಈ ಮಾನವ ತಾನಿದ್ದ ತೊಟ್ಟಿಲನ್ನೇ ಚಿಂದಿ ಚಿಂದಿಮಾಡಿದ. ಉಣಬಡಿಸ ಬಂದ ಪ್ರಕೃತಿ ಮಾತೆಯ ಶೀಲಭಂಗ ಮಾಡಿ, ರಾಡಿ ಮಾಲಿನ್ಯದ ರಕ್ಕಸನನ್ನು ಸೃಷ್ಠಿಸಿದ. ಇದುವರೆಗೆ ಆಹಾರ, ಬಟ್ಟೆ ಮತ್ತು ವಸತಿ ಈ ಮೂರು ಮಾನವನ ಮೂಲಭೂತ ಅಗತ್ಯಗಳಾಗಿದ್ದವು. ಆದರೆ ಈಗ ಇವಕ್ಕೆಲ್ಲ ಮೂಲಾಧಾರವಾಗಿದ್ದ ನೀರು ಮತ್ತು ಗಾಳಿಗೇ ಅಭಾವ ಉಂಟಾಗಿದೆ.''

ನಿಜ ಮಾನವ ಕಾಲಿಟ್ಟ ಭೂಮಿ ಮೊದಲಿನಂತಿಲ್ಲ. ಗೊತ್ತು ಗುರಿಯಿಲ್ಲದೆ ತನ್ನ ಸಂತಾನವನ್ನು ಬೆಳೆಸಿದ್ದಾನೆ. ಬೆಳೆಸುತ್ತಲೂ ಇದ್ದಾನೆ. ತನ್ನ ಉಳಿವಿಗಾಗಿ ಈ ಭೂಗ್ರಹದ ಉಳಿದ ಜೀವರಾಶಿಗಳನ್ನೆಲ್ಲ ಬಲಿ ತೆಗೆದುಕೊಳ್ಳುತ್ತಿದ್ದಾನೆ. ನಿಸರ್ಗದತ್ತ ಸೌಂದರ್ಯಕ್ಕೆ ಬೆಂಕಿ ಹಚ್ಚಿ ಆ ಬಿಸಿಯ ಝಳಕ್ಕೆ ತಾನೇ ಸೊರಗಿ ಹೋಗುತ್ತಿದ್ದಾನೆ.

ತನ್ನ ಬದುಕಿನ ಅವಸರದಲ್ಲಿ ಮೈಮರೆತಿದ್ದ ಮಾನವ ಜಾಗೃತಗೊಂಡ ಸಂಕೇತ 1927ರ ಜೂನ್ 5ರಂದು ಸ್ಟಾಕ್ ಹೋಂನಲ್ಲಿ ನಡೆದ ವಿಶ್ವಸಂಸ್ಥೆಯ ಮಾನವ ಪರಿಸರ ಸಮ್ಮೇಳನ. ''ಜಾಗತಿಕ ಪರಿಸರ ಮಾಲಿನ್ಯ, ಸಂಪನ್ಮೂಲ ಮತ್ತು ಜನಸ್ವಾಸ್ಥ್ಯ ಸಮಸ್ಯೆ''ಗಳನ್ನು ಎದುರಿಸಲು ಆ ಸಮ್ಮೇಳನದಲ್ಲಿ ಕಾರ್ಯಸೂತ್ರವೊಂದನ್ನು ರೂಪಿಸಲಾಯಿತು. ಈ ಉದ್ದೇಶಕ್ಕಾಗಿ ರಾಷ್ಟ್ರ ಸರಕಾರಗಳ ಗಮನ ಸೆಳೆಯಲಿಕ್ಕಾಗಿಯೇ 'ವಿಶ್ವಪರಿಸರ ಯೋಜನೆ'' ಎಂಬ ಉಪಸಂಸ್ಥೆ ಸೃಷ್ಟಿಯಾಯಿತು. ಪರಿಸರ ಪ್ರಜ್ಞೆಯನ್ನು ಸದಾ ಜಾಗೃತವಾಗಿಡುವ ಒಂದು ಹೆಜ್ಜೆ ಪ್ರತಿವರ್ಷ ಜೂನ್ 5ರಂದು ಆಚರಿಸಲಾಗುತ್ತಿರುವ ''ವಿಶ್ವ ಪರಿಸರ ದಿನ''.

ನಾವು ಪರಿಸರ, ಎನ್ನುವುದು-ಮಾನವ, ಪಶು-ಪಕ್ಷಿ, ಗಿಡ-ಮರ ಮತ್ತಿತರ ಜೀವಿಗಳು ಬದುಕಿ ಬಾಳಲು ಅವಶ್ಯಕವಾದ ಭೌತಿಕ ಹಾಗೂ ಜೈವಿಕ ವ್ಯವಸ್ಥೆಗೆ. ಈ ಜೀವಿಗಳೇ ಅಲ್ಲದೆ ನೀರು, ಗಾಳಿ, ಮಣ್ಣು, ಕಲ್ಲು ಖನಿಜ ಮತ್ತು ಹವಾಮಾನವೂ 'ಪರಿಸರ' ಶಬ್ದದ ವ್ಯಾಪ್ತಿಗೆ ಬರುತ್ತದೆ.

ಪರಿಸರ ಮಲಿನಗೊಂಡರೆ ಜೀವಿಯ ಬದುಕು ದುರ್ಭರವಾಗುತ್ತದೆ. ಎಲ್ಲ ಜೀವಿಗಳಿಗೂ ಮುಕುಟಪ್ರಾಯವಾಗಿರುವ ಮಾನವನ ಪರಿಸರದ ಗತಿ ಇಂದು ಏನಾಗಿದೆ? ಅವನ ಪರಿಸರದ ಮೂರು ಮುಖ್ಯ ಅಂಶಗಳೆಂದರೆ ನೆಲ, ಜಲ ಮತ್ತು ಅನಿಲ.

ನಮ್ಮನ್ನು ಹೊತ್ತು ನಮ್ಮ ಬದುಕಿಗೆ ಅನ್ನಕೊಡುವ ನೆಲ ಈಗ ಮಲಿನವಾಗಿದೆ. ನೆಲ ಮಾಲಿನ್ಯದ ಭೀಕರ ಪರಿಣಾಮದ ಬಗ್ಗೆ ನಾವು ಉದಾಸೀನ ತಾಳಿದ್ದೇವೆ. ನೆಲದಲ್ಲಿ ಮಹತ್ವಪೂರ್ಣವಾದುದೆಂದರೆ ಅದರ ಮೇಲ್ಮಣ್ಣು.

ನಮಗೆ ಬೇಕಾದ ಆಹಾರ ಧಾನ್ಯಗಳನ್ನು ಬೆಳೆದುಕೊಡಲು ಈ ಮೇಲ್ಮಣ್ಣು ಅತ್ಯಂತ ಮುಖ್ಯವಾದುದು. ಆದರೆ ಪ್ರಸ್ತುತ, ಮಳೆಯ ನೀರು ನೀರಾವರಿ, ನೆರೆ ಹಾವಳಿ ಮೊದಲಾದವುಗಳ ಪರಿಣಾಮವಾಗಿ ಒಂದು ವರ್ಷಕ್ಕೆ 6 ಸೆಂಟಿಮೀಟರಿನಷ್ಟು ಮೇಲ್ಮಣ್ಣು ನಷ್ಟವಾಗುತ್ತಿದೆ. ಈ ನಷ್ಟದಿಂದ ಬೆಳೆಗೆ ಬೇಕಾದ ಜೈವಿಕ ಅಂಶಗಳ ಕೊರತೆಯುಂಟಾಗಿ ಉತ್ಪಾದನೆಗೆ ಭಾರೀ ಧಕ್ಕೆ ಒದಗುತ್ತಿದೆ.

ಮಳೆಯಿಂದ ಕೊಚ್ಚಿಹೋಗುವ ಮೇಲ್ಮಣ್ಣು ಜಲಾಶಯ, ಕೊಳ, ನದಿ ಮೊದಲಾದವುಗಳ ತಳಸೇರಿ ಅವುಗಳ ಜಲ ಸಂಗ್ರಹಣೆಯ ಸಾಮರ್ಥ್ಯವನ್ನು ಕುಂಠಿತಗೊಳಿಸುತ್ತಿದೆ. ನದಿಗಳ ಹೂಳುಗಳು ಪ್ರವಾಹಕ್ಕೆ ಕಾರಣವಾಗುತ್ತಿವೆ.

ನೆಲದ ಸವಕಳಿಯಿಂದ ಆಗುವ ನಷ್ಟವನ್ನು ತಪ್ಪಿಸದಿದ್ದರೆ ಮಾನವ ಮುಂದೆ ತೆರಬೇಕಾದ ದಂಡ ಅಷ್ಟಿಷ್ಟಲ್ಲ. ಆದ್ದರಿಂದ ಯೋಜಿತ ಕೃಷಿ ಪದ್ಧತಿ, ಜೀವಜನ್ಯ ಗೊಬ್ಬರಗಳ ಬಳಕೆ, ಮುಂದಾಲೋಚನೆಯ ನೀರಾವರಿ ಇವುಗಳ ಕಡೆ ಗಮನ ಕೊಡಬೇಕು. ಹಾಗೆ ಗಮನ ಕೊಟ್ಟರೆ ಮಾತ್ರ ಮಣ್ಣಿನ ಸಾರಸಂರಕ್ಷಣೆ, ಹೆಚ್ಚು ಬೆಳೆ,ಹೆಚ್ಚು ಫಲ!

ಮಾನವನ ಪ್ರಾಥಮಿಕ ಅಗತ್ಯಗಳಲ್ಲಿ ನೀರಿನ ಸ್ಥಾನ ಗಮನಾರ್ಹವಾದುದು. ನೀರು ಭೂ ತಾಯಿಯ ಎದೆ ಹಾಲು. ಅದು ವಿಷವಾದರೆ ಗತಿ ಏನು?

ಭೂಮಿಯ ಮೇಲಿರುವ ನೀರಿನಲ್ಲಿ ಶೇಕಡ 97ರಷ್ಟು ಭಾಗ ಉಪ್ಪು ನೀರು. ಮಾನವ ಬಳಕೆಯ ಸಿಹಿನೀರಿನ ಪಾಲು ಅತ್ಯಂತ ಕಡಿಮೆ. ಅದನ್ನು ನಾವು ಶುಚಿಯಾಗಿಟ್ಟುಕೊಳ್ಳದಿದ್ದರೆ ಹೇಗೆ?

ನಮ್ಮ ನೀರಿನ ಮೂಲಗಳೆಂದರೆ, ಕೆರೆ-ಬಾವಿಗಳು ಮತ್ತು ನದಿಗಳು. ಈ ಮೂಲಗಳಿಗೆ ನಗರಗಳ ಕೊಳಚೆ ನೀರು. ಕಾರ್ಖಾನೆಗಳು ಬಳಸಿದ ನೀರು ಮೊದಲಾದ ಹೊಲಸೆಲ್ಲ ಸೇರಿ ಅದರಿಂದ ಆಗುವ ದುಷ್ಪರಿಣಾಮವನ್ನು ಬೇರೆ ಹೇಳಬೇಕಾಗಿಲ್ಲ.

ವಿಷಪೂರಿತವಾದ ನೀರು ಬಳಸುವ ಜನರಿಗೆ ವಿಷಮ ಶೀತಜ್ವರ, ಕಾಲರಾ, ಅತಿಸಾರ, ಆಮಶಂಕೆ, ಕಾಮಾಲೆ ಮೊದಲಾದ ರೋಗ ರುಜಿನಗಳು ಕಟ್ಟಿಟ್ಟ ಬುತ್ತಿಯಾಗುತ್ತವೆ. 1955ರಲ್ಲಿ ಕಲುಷಿತ ಯಮುನಾ ನದಿ ನೀರನ್ನು ಬಳಸಿದ ದಿಲ್ಲಿ ನಗರದಲ್ಲಿ 4,000 ಜನ ಅರಿಸಿನ ಕಾಮಾಲೆಗೆ ತುತ್ತಾದ ದಾಖಲೆಯಿದೆ.

ಕಲುಷಿತ ನೀರಿನಿಂದ ಉಂಟಾಗುವ ರೋಗಗಳಿಂದಾಗಿ 73 ದಶಲಕ್ಷ ಕೆಲಸದ ದಿನಗಳು ಹಾಳಾಗುತ್ತವೆಂದೂ, ಈ ರೋಗಗಳ ಚಿಕಿತ್ಸೆಗೆ ಆಗುವ ಖರ್ಚು ಮತ್ತು ಕೆಲಸ ಹಾನಿಯಿಂದಾಗುವ ನಷ್ಟ ಸೇರಿದರೆ ವರ್ಷಕ್ಕೆ 600

ಮನುಷ್ಯನನ್ನು ಸ್ವಾವಲಂಬಿಯನ್ನಾಗಿ ಹಾಗೂ ನಿಸ್ವಾರ್ಥಿಯನ್ನಾಗಿ ಮಾಡುವುದೇ ಶಿಕ್ಷಣ - ಋಗ್ವೇದ.

ಕೋಟಿ ರೂಪಾಯಿಗಳಷ್ಟು ನಷ್ಟ ಉಂಟಾಗುವುದೆಂದೂ ಅಂದಾಜು ಮಾಡಲಾಗಿದೆ.

ಆದ್ದರಿಂದ ಕುಡಿಯುವ ನೀರಿನ ಶುಚಿತ್ವವನ್ನು ಕಾಪಾಡುವುದು ಮುಖ್ಯವಾದುದು. ಶುದ್ಧವಾದ ಕುಡಿಯುವ ನೀರು ಸರಬರಾಜಿನಿಂದ ರಿಂದಲೇ ನೂರಕ್ಕೆ 60ರಷ್ಟು ರೋಗ ರುಜಿನಗಳನ್ನು ತಡೆಗಟ್ಟಬಹುದೆಂದು ವೈದ್ಯಕೀಯ ತಜ್ಞರು ಹೇಳುತ್ತಾರೆ.

ಮಾನವನು ತನಗೆ ತಾನೇ ಮಾಡಿಕೊಂಡಿರುವ ಮತ್ತೊಂದು ಅಪಚಾರ ವಾಯು ಮಾಲಿನ್ಯ. ಮಾನವ ಅನ್ನ-ನೀರುಗಳಿಲ್ಲದೆ ಕೆಲ ಸಮಯ ಜೀವಿಸಿರಲಿಕ್ಕೆ ಸಾಧ್ಯವಾದೀತು. ಆದರೆ ಗಾಳಿ ಬಿಟ್ಟು ಇರಲು ಸಾಧ್ಯವಿಲ್ಲ. ಎಂತಲೇ ಅದಕ್ಕೆ 'ಪ್ರಾಣವಾಯು' ಎನ್ನುವುದು.

ಆದರೆ ಇಂದು ನಾವು ಸೇವಿಸುವ ಗಾಳಿ ಎಷ್ಟು ಶುದ್ಧವಾಗಿದೆ? ಆಧುನಿಕ ಜಗತ್ತಿನಲ್ಲಿ ವಾತಾವರಣವನ್ನು ಕೆಡಿಸುವ ಸ್ಪರ್ಧೆಯೇ ನಡೆದಂತಿದೆ. ಸುತ್ತಣ ಹವೆ ಕೆಟ್ಟರೆ ನಮ್ಮ ಸ್ವತ್ತಿಗೇ ಅಪಾಯ ಎನ್ನುವ ಅರಿವೂ ನಮಗಿಲ್ಲ.

ನಗರ ಪ್ರದೇಶಗಳಲ್ಲಂತೂ ನಾವು ನಿತ್ಯ ವಿಷದ ಗಾಳಿಯನ್ನೇ ಸೇವಿಸುತ್ತಿದ್ದೇವೆ. ಪೆಟ್ರೋಲ್ ಮತ್ತು ಡೀಸಲ್ ವಾಹನಗಳು ಉಗುಳುವ ಹೊಗೆಯಲ್ಲಿನ ಸೀಸದ ಅಂಶ ಗಾಳಿಯನ್ನು ಸೇರುತ್ತದೆ. ಇನ್ನು ರಾಸಾಯನಿಕ ಕಾರ್ಖಾನೆಗಳು, ಅಲ್ಯೂಮಿನಿಯಂ ಸ್ಥಾವರಗಳು, ಕಾಗದ-ಸಿಮೆಂಟ್ ಕಾರ್ಖಾನೆಗಳು ಕಕ್ಕುವ ಹೊಗೆ ಮತ್ತು ಅನಿಲಗಳಲ್ಲಿ ಶುದ್ಧ ಗಾಳಿಯನ್ನು ಕೆಡಿಸುವ ಕಾರ್ಬನ್ ಡೈ ಆಕ್ಸೈಡ್, ಸಲ್ಫರ್ ಡೈ ಆಕ್ಸೈಡ್, ನೈಟ್ರೋಜಿನ್ ಆಕ್ಸೈಡ್, ಹೈಡ್ರೋ ಕಾರ್ಬನ್, ಮಸಿ ಧೂಳಿನ ಕಣಗಳು, ಲೋಹದ ತುಂತುರುಗಳು ಮೊದಲಾದವೆಲ್ಲ ಸೇರಿ ಅಂತಹ ಗಾಳಿಯನ್ನು ಸೇವಿಸುವ ಮಾನವ ಅನುಭವಿಸುವ ನೋವು ಅಷ್ಟಿಷ್ಟಲ್ಲ.

ಕೆಟ್ಟ ಹವಾ ಸೇವನೆಯಿಂದ ಶ್ವಾಸಕೋಶದ ರೋಗ, ಉಸಿರು ಕಟ್ಟುವುದು, ಕಣ್ಣು ಉರಿಯುವುದು, ಗಂಟಲು ಕೆರೆಯುವುದು, ಮಕ್ಕಳಿಗೆ ಬುದ್ಧಿ ಮಾಂದ್ಯವುಂಟಾಗುವುದು, ಮೊದಲಾಗಿ ಅನೇಕ ಆರೋಗ್ಯ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ.

ನಮ್ಮ ಪರಿಸರ ಕೆಡಲು ಕಾರಣವಾಗಿರುವುದು ಮಿತಿಮೀರಿ ಬೆಳೆಯುತ್ತಿರುವ ಜನಸಂಖ್ಯೆ. ಇದು ಈಗ ವಿಶ್ವದ ನೆಮ್ಮದಿಗೇ ಸವಾಲಾಗಿ ನಿಂತಿದೆ.ಜನಸಂಖ್ಯಾ ಹೆಚ್ಚಳದ ಪರಿಣಾಮ ಒಂದೆರಡು ಮಾತುಗಳಲ್ಲಿ ಹೇಳುವಂತಹುದಲ್ಲ. ಮಾನವ ಈ ಜನಸಂಖ್ಯಾ ಒತ್ತಡದಲ್ಲಿ ತನ್ನ ಬದುಕಿನ ಅಗತ್ಯಗಳನ್ನು ಪೂರೈಸಿಕೊಳ್ಳಲು ಏನೆಲ್ಲಾ ಪ್ರಯತ್ನ ನಡೆಸಿದ್ದಾನೆ. ಅವನ ಸ್ವಾರ್ಥದ ಪ್ರಯತ್ನಕ್ಕೆ ಮೊದಲು ಬಲಿಯಾದ ನಿಸರ್ಗ ಸಂಪತ್ತೆಂದರೆ ಅರಣ್ಯ.

ಒಂದು ಅಂದಾಜಿನ ಪ್ರಕಾರ ನಮ್ಮ ದೇಶದಲ್ಲಿ ಪ್ರತಿವರ್ಷ 10 ಲಕ್ಷ ಹೆಕ್ಟೇರಿನಷ್ಟು ಅರಣ್ಯ ನಾಶವಾಗುತ್ತಿದೆ. ಕೃಷಿ ಭೂಮಿಯ ವಿಸ್ತರಣೆ, ಜಲವಿದ್ಯುತ್ ಮತ್ತು ನೀರಾವರಿ ಜಲಾಶಯಗಳ ನಿರ್ಮಾಣ, ಕೈಗಾರಿಕೆಗಳ ಬೆಳವಣಿಗೆ, ಉರುವಲು, ರಸ್ತೆ ನಿರ್ಮಾಣ, ವಸತಿ ನಿವೇಶನಗಳು ಹೀಗೆ ಅನೇಕ ಕಾರಣಕ್ಕಾಗಿ ಅರಣ್ಯ ನಾಶ ನಡೆದಿದೆ.

ಬಹುಗುಣ ಅವರ ಮಾತಿನಲ್ಲೇ ಹೇಳಬೇಕೆಂದರೆ 'ಅರಣ್ಯಗಳು ಆಮ್ಲಜನಕದ ಬ್ಯಾಂಕುಗಳು'. ಪರಿಸರ ಸಮತೋಲನಕ್ಕೆ ಅವುಗಳ ಕಾಣಿಕೆ ಅಮೂಲ್ಯವಾದುದು. ಯಾವುದೇ ರಾಷ್ಟ್ರದಲ್ಲಿ ಪರಿಸರ ಸಮತೋಲನ ದೃಷ್ಟಿಯಿಂದ ಒಟ್ಟು ವಿಸ್ತೀರ್ಣದ ಮೂರನೆಯ ಒಂದು ಭಾಗದಷ್ಟು ಅರಣ್ಯ ಪ್ರದೇಶವಿರಬೇಕು.

ಅರಣ್ಯದಿಂದ ನೆಲ, ಜಲ ಮತ್ತು ಹವೆ ಮೂರರ ರಕ್ಷಣೆಯೂ ಆಗುತ್ತದೆ. ಭೂಮಿಯ ಸವಕಳಿ ತಪ್ಪಿಸುವಲ್ಲಿ ಅರಣ್ಯದ ಪಾತ್ರ ಪರಿಣಾಮಕಾರಿಯಾದುದು. ದನಗಳಿಗೆ ಮೇವಿರಲಿ, ಅಡಿಗೆಗೆ ಕಟ್ಟಿಗೆಯಿರಲಿ, ಕಟ್ಟಡಗಳಿಗೆ ಮರಮುಟ್ಟುಗಳಿರಲಿ ಅರಣ್ಯವೇ ಆಧಾರ. ಆದರೆ ಈಚೆಗೆ ಅರಣ್ಯ ಪ್ರದೇಶ ಕಡಿಮೆಯಾಗುತ್ತಿರುವುದು ಕಳವಳಕಾರಿ ಅಂಶ. 'ಸಮೃದ್ಧ ಕಾಡಿನಿಂದ ಸಮೃದ್ಧ ಮಳೆ' ಎನ್ನುವ ಮಾತಿನ ಸತ್ಯವನ್ನು ಇತ್ತೀಚಿನ ಮಳೆಯ ಹಂಗಾಮುಗಳು ತೋರಿಸಿಕೊಟ್ಟಿವೆ.

ಪರಿಸರ ಸಂರಕ್ಷಣೆಯ ಒಂದು ಮಹತ್ವದ ಕ್ರಮವಾಗಿ ಅರಣ್ಯ ಪ್ರದೇಶದ ವಿಸ್ತರಣೆ ಮತ್ತು ಸಾಮಾಜಿಕ ಅರಣ್ಯ ಬೆಳೆಸುವ ಕಾರ್ಯ ತ್ವರಿತವಾಗಿ ನಡೆಯಬೇಕಾಗಿದೆ. ಗ್ರಾಮಾಂತರದಲ್ಲಿ ಸಾಮಾಜಿಕ ಅರಣ್ಯವನ್ನು ಬೆಳೆಸುವ ಕಾರ್ಯಕ್ರಮ ಯಶಸ್ವಿಯಾದರೆ ಅಲ್ಲಿನ ಜನತೆಯ ಅರಣ್ಯ ವಸ್ತುಗಳ ಅಗತ್ಯದ ಪೂರೈಕೆಯಾಗುತ್ತದೆ.

ಆರ್ಥಿಕ ದೃಷ್ಟಿಯಿಂದಲಂತೂ ಅರಣ್ಯ ಸಂಪತ್ತು ಅತ್ಯಂತ ಬೆಲೆಬಾಳುವಂತಹುದು. ಅರಣ್ಯ ಸಂರಕ್ಷಣೆಯ ಇನ್ನೊಂದು ಆಶಯವೆಂದರೆ ಆ ಮೂಲಕ ವನ್ಯಜೀವಿಗಳ ಸಂರಕ್ಷಣೆ. ವನ್ಯಜೀವಿಗಳು ನಿಸರ್ಗ ನೀಡಿದ ಕಾಣಿಕೆಗಳೆಂಬುದನ್ನು ನಾವು ಮರೆಯಬಾರದು. ಅವುಗಳನ್ನು ಬೇಟೆಯಾಡಿ ಕೊಲ್ಲುವುದು ಅಪರಾಧ.

ಸಮೃದ್ಧ ಕಾಡಿನಲ್ಲಿ ಸ್ವತಂತ್ರವಾಗಿರುವ ವನ್ಯಜೀವಿಗಳನ್ನು ನೋಡುವುದೇ ಕಣ್ಣಿಗೆ ಒಂದು ಸುಂದರ ಅನುಭವ. ಒಟ್ಟಾರೆ, ಕಾಡಿದ್ದರೆ ನಾಡು ಎಂಬ ಗಾದೆ ಮಾತು ನಮಗೆ ಸದಾ ನೆನಪಿರಬೇಕು. ಕಾಡು ಕಡಿದು ನಾಡು ಬೆಳೆಸುವುದಲ್ಲ , ಕಾಡು ಬೆಳೆಸಿ ನಾಡು ಕಟ್ಟಬೇಕು. ಈಚೆಗೆ ಗ್ರಾಮೀಣ ಜನ ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಿರುವುದೂ ಪರಿಸರದ ಮೇಲೆ ಪರಿಣಾಮವುಂಟುಮಾಡಿದೆ. ನಗರ ಜನಸಂಖ್ಯೆ ಹೆಚ್ಚಾಗಿ ಅಲ್ಲಿನ ಜೀವನ ದಿನ ದಿನಕ್ಕೆ ದುರ್ಭರವಾಗುತ್ತಿದೆ.

ನಗರಗಳು ಇಂದು ವಸತಿ ಸಮಸ್ಯೆ , ಕುಡಿಯುವ ನೀರಿನ ಸಮಸ್ಯೆ, ಸಾರಿಗೆ ಸಮಸ್ಯೆ, ಆರೋಗ್ಯ ಸಮಸ್ಯೆ, ಸರಬರಾಜು ಸಮಸ್ಯೆ, ಶಾಲೆಗಳ ಸಮಸ್ಯೆ, ವಿದ್ಯುತ್ ಪೂರೈಕೆ ಸಮಸ್ಯೆ ಹೀಗೆ ಸಮಸ್ಯೆಗಳ ಆಗರಗಳಾಗಿವೆ. ಕೊರತೆಯ ನೆಲೆಗಳಾಗಿವೆ.

ನಗರಗಳಲ್ಲಿರುವ ಕೊಳಚೆ ಪ್ರದೇಶಗಳಂತೂ ನಾರುವ ನರಕಗಳಾಗಿವೆ. ಅಲ್ಲಿನ ಮಕ್ಕಳಿಗೆ ಆರೋಗ್ಯ ರಕ್ಷಣೆ ಕ್ಲಿಷ್ಟ ಸಮಸ್ಯೆಯಾಗಿದೆ. ವಾಹನ ಅಪಘಾತಗಳ ಸಂಖ್ಯೆಯಂತೂ ಹೇಳತೀರದು. ಬದುಕಿನ ದುರ್ಭರ ಪರಿಸ್ಥಿತಿಯಲ್ಲಿ ನಗರಗಳು ಕಳ್ಳತನ, ದರೋಡೆ, ಅಪರಾಧಗಳು, ರೋಗ ರುಜಿನಗಳ ಸಂತೆಗಳಾಗಿವೆ.

ಇಂತಹ ಪರಿಸ್ಥಿತಿಯಲ್ಲಿ ಮಾನವ ಹೇಗೆ ನೆಮ್ಮದಿಯಿಂದ ಇರಲು ಸಾಧ್ಯವಾದೀತು? ನಗರದ ಸಿಮೆಂಟ್ ರಸ್ತೆಗಳು ಮತ್ತು ಸಿಮೆಂಟು ಕಟ್ಟಡಗಳ ಪರಿಣಾಮವಾಗಿ ತಂಪಾದ ಹವೆಗೂ ಇಲ್ಲಿ ಅಭಾವ. ಹೊಗೆಮಂಜು, ಹೊಲಸು ವಾತಾವರಣ ನಗರ ಪ್ರದೇಶಗಳ ಸೌಂದರ್ಯ ಮತ್ತು ನೆಮ್ಮದಿಯನ್ನೇ ಹಾಳುಮಾಡಿವೆ.

ತಾಯ್ನಾಡು ಹಾಗೂ ತಾಯ್ನುಡಿಯಬಗ್ಗೆ ಹೆಮ್ಮೆಪಡುವಂತಹ ಮಕ್ಕಳನ್ನು ತರಬೇತಿಗೊಳಿಸುವುದೇ ಶಿಕ್ಷಣ - ಕೌಟಿಲ್ಯ.

ಇದನ್ನು ತಪ್ಪಿಸಬೇಕೆಂದರೆ ನಗರ ಪ್ರದೇಶಕ್ಕೆ ಹಳ್ಳಿಗರ ವಲಸೆಯನ್ನು ತಪ್ಪಿಸಬೇಕು. ಹಳ್ಳಿಗರು ಇದ್ದಲ್ಲಿಯೇ ಎಲ್ಲ ಜೀವನ ಸೌಲಭ್ಯಗಳನ್ನು ಕಲ್ಪಿಸಬೇಕು. ಪರಿಸರ ಮಾಲಿನ್ಯ ತನ್ನ ಕರಾಳ ಹಸ್ತವನ್ನು ಚಾಚಿ ಮಾನವನ ಬದುಕಿನ ಅರ್ಥವನ್ನೇ ಕಳೆಯುತ್ತಿರುವುದನ್ನು ಇತ್ತೀಚೆಗೆ ವಿಚಾರವಂತರೆಲ್ಲ ಗಮನಿಸಿದಂತೆ ಕಾಣುತ್ತದೆ. ಜಗತ್ತಿನ ಎಲ್ಲ ಭಾಗಗಳಲ್ಲೂ ಪರಿಸರ ಪ್ರಜ್ಞೆ ಈಗ ಜಾಗೃತವಾಗುತ್ತಿದೆ.

ಜಲ ಮಾಲಿನ್ಯ, ನೆಲಮಾಲಿನ್ಯ, ಅನಿಲ ಮಾಲಿನ್ಯಗಳಂತಹ ಪರಿಸರ ಮಾಲಿನ್ಯಗಳ ಸಾಲಿಗೆ ಮತ್ತೊಂದು ಮಾಲಿನ್ಯ ಸೇರುತ್ತದೆ ಅದು ಶಬ್ದ ಮಾಲಿನ್ಯ. ಸಾಮಾನ್ಯವಾಗಿ ಯಾರೇ ಆದರೂ ಶಾಂತ ವಾತಾವರಣದಲ್ಲಿ ಬದುಕಬೇಕೆಂದು ಇಚ್ಛಿಸುವುದು ಸಹಜ. ಆದರೆ ಇಂದಿನ ಪರಿಸ್ಥಿತಿ ಏನಾಗಿದೆ? ತೊಟ್ಟಿಲ ಕೂಸಿನಿಂದ ಹಿಡಿದು ಕಷ್ಟದ ದುಡಿಮೆಯ ಕಾರ್ಮಿಕನವರೆಗೆ ಯಾರಿಗೂ ನೆಮ್ಮದಿಯಿಲ್ಲದಂತಾಗಿದೆ.

ಇಲ್ಲೂ ಮಾನವನ ಅಸಭ್ಯತನದ್ದೇ ಕೈವಾಡ. ಕೆಲವರಿಗೆ ಪ್ರಶಾಂತ ವಾತಾವರಣವನ್ನು ಹಾಳುಮಾಡುವಲ್ಲೇ ತೃಪ್ತಿಯಿರುವಂತೆ ಕಾಣುತ್ತದೆ. ಇನ್ನೊಬ್ಬರ ನೆಮ್ಮದಿಯನ್ನು ಹಾಳುಮಾಡಿ ತಾನು ನೆಮ್ಮದಿಯಾಗಿರಬಹುದೆಂದು ಯಾರಾದರೂ ತಿಳಿದಿದ್ದರೆ ಅದು ಕೇವಲ ಭ್ರಮೆ. ಶಬ್ದ ಮಾಲಿನ್ಯದಿಂದ ನಮ್ಮ ಮನಸ್ಸಿನ ಮೇಲೆ ಬಹಳ ಕೆಟ್ಟ ಪರಿಣಾಮಗಳಾಗುತ್ತವೆ. ದೈಹಿಕವಾಗಿಯೂ ಕೆಲವು ಅನಿಷ್ಟಗಳಾಗುತ್ತವೆ. ಆದ್ದರಿಂದ ವಾತಾವರಣವನ್ನು ಶಾಂತವಾಗಿಡಲು ಎಲ್ಲರೂ ಯತ್ನಿಸಬೇಕು. ಮಾನವ ತನ್ನೆಲ್ಲ ನೋವು, ದಣಿವುಗಳನ್ನು ಪ್ರಶಾಂತ ವಾತಾವರಣದಲ್ಲಿ ಮರೆಯುತ್ತಾನೆ. ಅಂತಹ ವಾತಾವರಣ ಆತನ ದುಡಿಮೆಗೆ ಮತ್ತೆ ಚೇತನವುಂಟು ಮಾಡುತ್ತದೆ.

ಈ ಭೂಮಿಗೆ ನಾವೇ ಒಡೆಯರಲ್ಲ. ಇಲ್ಲಿರುವ ಸಂಪನ್ಮೂಲಗಳಿಗೆ ಹೇಗೆ ಒಂದು ಮಿತಿ ಇದೆಯೋ ಅದನ್ನು ನಾವು ಬಳಸುವಲ್ಲಿಯೂ ಒಂದು ಮಿತಿಯಿದೆ. ಜೊತೆಗೆ ಬಳಸಿದ ಹಾಗೆಯೇ ಅದನ್ನು ಬೆಳೆಸುವಲ್ಲಿಯೂ ನಮ್ಮ ಕರ್ತವ್ಯವಿದೆ.

ಈ ಲೋಕದ ಬದುಕು ನಮಗೆ ಸಮಾಧಾನವುಂಟುಮಾಡಬೇಕಾದರೆ ಪರಿಸರದ ಪರಿಶುದ್ಧತೆಯನ್ನು ಕಾಪಾಡಲು ನಾವು ಶ್ರಮಿಸಬೇಕು. ಜೀವ ಸಂಪತ್ತಿನ ರಕ್ಷಣೆ ಮತ್ತು ಪೋಷಣೆ, ಶಕ್ತಿ ಮೂಲಗಳ ಅಭಿವೃದ್ಧಿ ಮತ್ತು ಶಕ್ತಿಯ ಸಮರ್ಥ ಬಳಕೆ, ಕಸವನ್ನು ರಸವಾಗಿ ಪರಿವರ್ತಿಸುವ ಜಾಣ್ಮೆ , ಜನಸಂಖ್ಯಾ ನಿಯಂತ್ರಣದ ಸರಳ ವಿಧಾನ, ನಿಸರ್ಗ ನಿಯಮಗಳಿಗೆ ಹೊಂದಿಕೊಳ್ಳುವ ಕ್ರಮ ಇವೆಲ್ಲವುಗಳ ಬಗ್ಗೆ ನಾವು ಗಂಭೀರವಾಗಿ ವಿಚಾರಮಾಡಬೇಕು.

ನಾವಿರುವ ಜಗತ್ತಿನಲ್ಲಿ ನಮ್ಮ ಮುಂದಿನ ಪೀಳಿಗೆಗೂ ನೆಮ್ಮದಿಯಿಂದ ಬದುಕುವ, ಅವಕಾಶವಿರಬೇಕು. ಅಂತಹ ಅವಕಾಶವೆಂದರೆ ಇಂದಿನ ಪರಿಸರಕ್ಕೆ ಒದಗಿ ಬಂದಿರುವ ಆಪತ್ತನ್ನು ತಡೆಗಟ್ಟುವುದು. ●



# ಭಾರತ ಸ್ಕೌಟ್-ಗೈಡ್ ಕಥೆಯ ಲಾವಣಿ

ಬಿ.ರೇವಮ್ಮ ಸ.ಶಿ.
ಸ.ಹಿ.ಪ್ರಾ.ಶಾಲೆ, ಹಳೇಪೇಟೆ,
ದಾವಣಗೆರೆ

ಭಾರತ ಮಾತೆಯ ಮುದ್ದಿನ ಮಕ್ಕಳೆ
ಹೇಳುವೆ ಕೇಳಿ ಕಥೆಯೊಂದ
ಭಾರತ ಸ್ಕೌಟು-ಗೈಡ್‌ನ ದಳವು
ಆರಂಭವಾದ ಕಥೆಯೊಂದ ॥ಪ॥

ಲಾರ್ಡಬೇಡನ್ ಪೊವೆಲ್ ಎಂಬ
ದೇವ ಮಾನವನು ಹುಟ್ಟಿದನು
ಓದು ಬರಹವ ಕಲಿತು ಅವನು
ಸೈನಿಕ ಸೇವೆಗೆ ಸೇರಿದನು

ಆಫ್ರಿಕದಲ್ಲಿ ಡಿನಿಝೂಲು ಎಂಬ
ಬ್ರಿಟಿಷ್ ವಿರೋಧಿ ಇರುತಿರಲು
ಅವನ ಬಲವನು ಕಡಿದು ಹಾಕಲು
ಬೇಡನ್ ಪೊವೆಲ್‌ರು ನಡೆದಿರಲು

ಝೂಲುಗಳು ಓಡಿ ಹೋದರು
ಪೊವೆಲ್‌ರ ಭೀಕರ ದಾಳಿಗೆ ಕಂಗೆಟ್ಟು
ಮರದ ತುಂಡುಗಳ ಕಂಠಹಾರವು
ಸೇರಿತು ಪೊವೆಲ್‌ರ ಪಾಕೇಟು

ಆಫ್ರಿಕದಲ್ಲಿ ಪೊವೆಲ್ಲರು ಒಂದು
ಸಂಘಟನೆಯನ್ನು ಮಾಡಿದರು
ಆ ಸಂಘಟನೆಗೆ ಸ್ಕೌಟು-ಗೈಡುಗಳೆಂದು
ಕರೆದು ತರಬೇತಿ ನೀಡಿದರು

ಭಾರತದಲ್ಲಿ ಪೊವೆಲ್ಲರು
ಸ್ಕೌಟು-ಗೈಡು ತಂಡವ ಕಟ್ಟಿದರು
ಚಿಕ್ಕ ತಂಡಗಳ ಸ್ಕೌಟು ಗೈಡುಗಳಿಗೆ
ತರಬೇತಿಯನ್ನು ನೀಡಿದರು

ಪೊವೆಲ್ಲರು ಏಡ್ಸ್-ಟು-ಸ್ಕೌಟಿಂಗ್
ಎಂಬ ಪುಸ್ತಕವನ್ನು ರಚಿಸಿದರು
ಭಾರತ ಸ್ಕೌಟು-ಗೈಡಿನ ತಂಡಕೆ
ನವ ಚೈತನ್ಯವ ನೀಡಿದರು

ಭಾರತ ಮಾತೆಯ ಮುದ್ದಿನ ಮಕ್ಕಳೆ
ಹೇಳುವೆ ಕೇಳಿ ಕಥೆಯೊಂದ ●

ಶಾರದಾ ದೇವಿಯೇ ನಿನ್ನ ಭಂಡಾರವು ಅಪೂರ್ವವಾದುದು, ವೆಚ್ಚಮಾಡಿದರೆ ಬೆಳೆಯುತ್ತದೆ, ಕೂಡಿಟ್ಟರೆ ಕ್ಷಯಿಸುತ್ತದೆ - ಸುಭಾಷಿತ ರತ್ನಭಂಡಾರ.



# ದಾವಣಗೆರೆ ವಿದ್ಯಾ ಕ್ಷೇತ್ರದ ತಾಯಿಬೇರುಗಳು

ಶ್ರೀ ಬಾ.ಮ. ಬಸವರಾಜಯ್ಯ
ದಾವಣಗೆರೆ

ದಾವಣಗೆರೆ ವಿದ್ಯಾ ಕ್ಷೇತ್ರದಲ್ಲಿ ಇಂದು ಅಂತರರಾಷ್ಟ್ರೀಯ ಮಟ್ಟದಲ್ಲಿ ಗಮನ ಸೆಳೆದಿದೆ. ದೇಶ - ವಿದೇಶದ ವಿದ್ಯಾರ್ಥಿ - ವಿದ್ಯಾರ್ಥಿನಿಯರನ್ನು ನಗರದ ವಿವಿಧ ಬಡಾವಣೆಯಲ್ಲಿ ಕಾಣಬಹುದಾಗಿದೆ. ಇಂಜಿನಿಯರಿಂಗ್, ವೈದ್ಯಕೀಯ, ದಂತ ವೈದ್ಯಕೀಯ, ಆಯುರ್ವೇದ ವೈದ್ಯಕೀಯ, ಔಷಧಿ ಶಾಸ್ತ್ರ ತರಬೇತಿ, ಶುಶ್ರೂಕರ ತರಬೇತಿ... ಅಂದರೆ ಕೃಷಿ ಕಾಲೇಜೊಂದನ್ನು ಹೊರತುಪಡಿಸಿ ಮಿಕ್ಕೆಲ್ಲಾ ವಿಷಯಗಳ ಅಭ್ಯಾಸವನ್ನು ದಾವಣಗೆರೆ ನಗರದಲ್ಲಿ ಮಾಡಬಹುದಾಗಿದೆ. ಈ ವ್ಯಾಪಾರಿ ಕೇಂದ್ರ, ವಿದ್ಯಾಕ್ಷೇತ್ರಕ್ಕೆ ಸೌಕರ್ಯ ಕಲ್ಪಿಸುವಲ್ಲಿ ಅಷ್ಟರ ಮಟ್ಟಿಗೆ ಬೆಳೆದು ಬಿಟ್ಟಿದೆ.

ದಾವಣಗೆರೆ ನಗರದಲ್ಲಿ ವಿದ್ಯಾ ಕ್ಷೇತ್ರದ ಈ ಬೆಳವಣಿಗೆಗೆ ಹತ್ತು ಹಲವು ಕಾರಣಗಳಿವೆ. ಇಲ್ಲಿನ ಅನೇಕ ಗಣ್ಯರು, ಕೊಡುಗೈ ದಾನಿಗಳ ಪರಿಶ್ರಮವಿದೆ. ನಗರ ಕರ್ನಾಟಕ ರಾಜ್ಯದ ಕೇಂದ್ರ ಬಿಂದುವಾಗಿರುವುದು ಇವಕ್ಕೆ ಕಾರಣ ಎನ್ನಬಹುದು. ಇಲ್ಲಿ ಜನರಿಗೆ ದಾನ-ಧರ್ಮದ ನಿಶ್ಚಿತ ಮನೋಭಾವ ಬಲಿಯಲು ಮಠ-ಮಾನ್ಯಗಳ ಪ್ರಭಾವಗಳು ಕೆಲಸ ಮಾಡಿವೆ ಎಂದರೆ ತಪ್ಪಾಗಲಾರದು. ವಿದ್ಯಾ ಕ್ಷೇತ್ರಕ್ಕೆ ದಾನ ಮಾಡಿದ ಉದಾಹರಣೆಗಳು ಐವತ್ತರ ದಶಕದಿಂದ ಈಚೆಗೆ ಹೆಚ್ಚಾಗಿ ಕಾಣಬರುತ್ತದೆ.

ಐವತ್ತರ ದಶಕದ ಪೂರ್ವದಲ್ಲಿ ದಾವಣಗೆರೆ ನಗರದ ವಿದ್ಯಾ ಕ್ಷೇತ್ರಕ್ಕೆ ತಾಯಿಬೇರಾಗಿ ನಿಂತ ಶಾಲೆಗಳು ಇಂದಿಗೂ ನಮ್ಮ ಕಣ್ಣ ಮುಂದೆ ಜೀವಂತವಾಗಿವೆ. ಅವುಗಳ ಹಿರಿಮೆ ಅನನ್ಯವಾದದ್ದು.

ಬಹುಶಃ ಆಂಗ್ಲೋ ವರ್ನಾಕ್ಯುಲರ್ ಶಾಲೆ ದಾವಣಗೆರೆ ನಗರದ ವಿದ್ಯಾ ಕ್ಷೇತ್ರದ ತಾಯಿ ಬೇರು ಎಂದರೆ, ಆ ಶಾಲೆ ಎಲ್ಲಿತ್ತು? ಎಂದು ಎಲ್ಲರ ಕಣ್ಣುಗಳು ಕುತೂಹಲದಿಂದ ಅರಳಿಬಿಡುತ್ತವೆ. ಈಗ ತರಕಾರಿ ಮಾರುಕಟ್ಟೆಯ ಬಳಿ ಬಯಲು ತಿಪ್ಪೆಯ ಒಡಲ ನಡುವೆ,(ಈಗ ಸುಧಾರಿಸಿದೆ) ದೀನ-ದಲಿತರ ಮಕ್ಕಳ ವಿದ್ಯಾಭ್ಯಾಸಕ್ಕಾಗಿ (ನೌಕರರ, ಶ್ರೀಮಂತರ ಮಕ್ಕಳು ಈಗ ಈ ಶಾಲೆಗೆ ಕಾಲಿಡುವುದಿಲ್ಲ) ಜೀವ ಹಿಡಿದು ನಿಂತಿರುವ ಶಾಲೆಯೇ (ಓಲ್ಡ್ ಮಿಡ್ಲಸ್ಕೂಲ್) ಇಂದಿನ ಆಂಗ್ಲೋ ವರ್ನಾಕ್ಯುಲರ್ ಶಾಲೆ. ಸರಿಸುಮಾರು ಈಗ್ಗೆ ತೊಂಭತ್ತರ ವರ್ಷಗಳ ಹಿಂದೆ ರಾಷ್ಟ್ರದ ಹಿರಿಯ ರಾಜಕೀಯ ಮುತ್ಸದ್ದಿ ಹಾಗೂ ಕರ್ನಾಟಕದ ಮಾಜಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಅವರು ಓದಿದ ಈ ಶಾಲೆಗೆ ಈಗ ನೂರು ವರ್ಷ ತುಂಬಿವೆ. 1900ಕ್ಕೆ ಮುನ್ನ ಕಟ್ಟಲು ಪ್ರಾರಂಭಿಸಿದ ಈ ಶಾಲೆ ಅಧಿಕೃತವಾಗಿ 1900ರಲ್ಲಿ ಪ್ರಾರಂಭಗೊಳ್ಳುತ್ತದೆ.

ಈ ಓಲ್ಡ್ ಮಿಡ್ಲಸ್ಕೂಲ್‌ನಲ್ಲಿ ಪ್ರಾಥಮಿಕ ಶಾಲೆಯಿಂದ ಅಪ್ಪರ್ ಸೆಕೆಂಡರಿ ಟ್ರೈನಿಂಗ್‌ವರೆಗೆ ಕಲಿಸಲಾಗುತ್ತಿತ್ತು. ಕಾಲೇಜಿಯಟ್ ಹೈಸ್ಕೂಲ್ ಎಂಬ ಹೆಸರನ್ನು ಈ ಶಾಲೆ ಪಡೆದಿತ್ತು. ಕಾರಣ 1922ರಲ್ಲಿ ಸರ್ಕಾರಿ ಪ್ರೌಢಶಾಲೆ (ಗೌರ್ನಮೆಂಟ್ ಹೈಸ್ಕೂಲ್) ಪ್ರಾರಂಭವಾಗುವ ಮುನ್ನ ಓಲ್ಡ್ ಮಿಡ್ಲಸ್ಕೂಲ್‌ನಲ್ಲಿಯೇ ಪ್ರೌಢಶಾಲಾ ತರಗತಿಗಳು ನಡೆಯುತ್ತಿದ್ದವು ಎಂದು ಹಿರಿಯರಾದ ಅ.ರಾ. ಶಂಕರಯ್ಯ ಅವರು ತಮ್ಮ ಅನುಭವ ಹೇಳಿಕೊಳ್ಳುವಾಗ ತಿಳಿಸಿದರು.

ಬಹುಶಃ ದಾವಣಗೆರೆಯ ಹಳೆಯ ತಲೆಮಾರಿನ ಗಣ್ಯಾತಿ ಗಣ್ಯರೆಲ್ಲಾ ಓಲ್ಡ್ ಮಿಡ್ಲ ಸ್ಕೂಲ್‌ನಲ್ಲೇ ಕಲಿತವರಾಗಿದ್ದಾರೆ. ಈ ಭಾಗದಲ್ಲಿ ಚಿತ್ರದುರ್ಗ



**1936ರಲ್ಲಿ ನಗರದ ಶಿಕ್ಷಕರ ಸಮಾವೇಶದಲ್ಲಿ ತೆಗೆದ ಚಿತ್ರ**

ಕರ್ತವ್ಯವನ್ನು ಸರಿಯಾಗಿ ನಿರ್ವಹಿಸದೇ, ಹಕ್ಕಿಗಾಗಿ ಹೋರಾಡಬಾರದು - ವಿನೋಬಾ ಭಾವೆ.



ಶಿಕ್ಷಣಕ್ಕೆ ಅಡಿಪಾಯ - ಓಲ್ಡ್ ಮಿಡಲ್ ಸ್ಕೂಲ್



1922ರಲ್ಲಿ ಕಟ್ಟಿದ ಸರ್ಕಾರಿ ಬಾಲಕರ ಪ್ರೌಢಶಾಲೆ ಚಿತ್ರ

ಬಿಟ್ಟರೆ ಇಂತಹ ಸುಸಜ್ಜಿತ ಶಾಲೆ ಇದ್ದದ್ದು ದಾವಣಗೆರೆಯಲ್ಲಿ ಮಾತ್ರ.

ಬ್ರಿಟಿಷ್ ಇಂಜಿನಿಯರ್‌ಗಳು ಕಟ್ಟಿದ ಈ ಶಾಲೆ ನೂರು ವರ್ಷಗಳಾದರೂ ಜುಪ್ ಎನ್ನದೇ ಕೋಟೆಯಂತೆ ಗಟ್ಟಿಯಾಗಿ ನಿಂತಿದೆ. ಹದಿನಾಲ್ಕು ಇಂಚಿನ ಇಟ್ಟಿಗೆ ಗೋಡೆಯನ್ನು ದಾಟು-ಪಾಟು (ಒಂದು ಇಟ್ಟಿಗೆ ಅಡ್ಡ ಮತ್ತೊಂದು ಇಟ್ಟಿಗೆ ಉದ್ದ ಇಡುವುದು) ಪದ್ಧತಿಯಲ್ಲಿ ಕಟ್ಟಲಾಗಿದೆ. ವಿಶೇಷವಾಗಿ ತಿರುವಿ ಹದಗೊಳಿಸಿ ತಯಾರಿಸಿದ ಗಾರೆಯನ್ನು ಗೋಡೆಗಳಿಗೆ ಪ್ಲಾಸ್ಟ್ ಮಾಡಲಾಗಿದೆ. ಬೆಲೆ ಬಾಳುವ ತೇಗದ ಮರದಿಂದ ಬಾಗಿಲು, ಕಿಟಕಿಗಳನ್ನು ಮಾಡಲಾಗಿದೆ. ಒಳ ವಿನ್ಯಾಸ ಕೂಡ ಅಚ್ಚುಕಟ್ಟಾಗಿದೆ. ವಿಶಾಲವಾಗಿ ಕಟ್ಟಿದ ಪ್ರತಿ ಎರಡು ರೂಂಗಳ ಮಧ್ಯದಲ್ಲಿ ಅಡ್ಡ ಗೋಡೆಗಳಿಗೆ ಬದಲಾಗಿ ತೇಗದ ಮಡಚು ಕದಗಳುಳ್ಳ ಬಾಗಿಲು ನಿರ್ಮಿಸಲಾಗಿದೆ. ಶಾಲಾ ಸಮಾರಂಭಗಳು, ಸಮಾಲೋಚನಾ ಸಭೆಗಳು ನಡೆದಾಗ ಈ ಮಧ್ಯದ ಬಾಗಿಲುಗಳನ್ನು ಗೋಡೆಯ ಎರಡು ಬದಿಗೆ ಸರಿಸಿ ನೂರಾರು ಜನ ಕುಳಿತುಕೊಳ್ಳುವುದಕ್ಕೆ ಅನುವು ಮಾಡಬಹುದಾಗಿರುವುದನ್ನು ನಾವು ಈಗಲೂ ನೋಡಬಹುದಾಗಿದೆ. ಒಟ್ಟಾಗಿ ಇಡೀ ಕಟ್ಟಡ ಆಕರ್ಷಕವಾಗಿದೆ.

ಈ ಶಾಲೆಯಲ್ಲಿ ಅಭ್ಯಾಸ ಮಾಡಿದ ಹಾಗೂ ಪಾಠ ಮಾಡಿದ ಹಿರಿಯರು ಹೇಳುವಂತೆ ಓಲ್ಡ್ ಮಿಡ್ಲ ಸ್ಕೂಲ್‌ನಲ್ಲಿ ಅಚ್ಚುಕಟ್ಟಾಗಿ, ಬಹು ನಾಜೂಕಿನಿಂದ ಕೆತ್ತಿ ತಯಾರಿಸಿದ ಇಪ್ಪತ್ತೈದು ತೇಗದ ಮರದ ಬೀರುಗಳಿದ್ದವು. ಅವುಗಳ ತುಂಬಾ ಅಪರೂಪದ ಪುಸ್ತಕಗಳು ತುಂಬಿದ್ದವು. ಬೀರುಗಳನ್ನು ಮತ್ತು ಗ್ರಂಥ ಭಂಡಾರವನ್ನು ಕೆಲವರು ತೆಗೆದುಕೊಂಡುಹೋಗಿ ತಮ್ಮ ಮನೆಯಲ್ಲಿ ಇಟ್ಟುಕೊಂಡರು. ಈಗ್ಗೆ ಸುಮಾರು ಅರವತ್ತು ವರ್ಷಗಳ ಹಿಂದೆ ರಾತ್ರೋರಾತ್ರಿ ಶಾಲೆಗೆ ಬೆಂಕಿ ಬಿದ್ದು (ಶಾಲೆಗೆ ಸಂಬಂಧಿಸಿದವರೊಬ್ಬರು ಬೆಂಕಿ ಹಾಕಿ?) ಅಳಿದುಳಿದ ಬೀರು ಮತ್ತು ಗ್ರಂಥ ಭಂಡಾರ ಸುಟ್ಟು ಹೋಯಿತು ಎಂದು ಹೇಳಲಾಗುತ್ತಿದೆ. ಅದೇನೇ ಇರಲಿ ಅಲ್ಲಿಂದ ಮುಂದೆ ಓಲ್ಡ್ ಮಿಡ್ಲಸ್ಕೂಲ್ ತನ್ನ ವೈಭವವನ್ನು ಕಳೆದುಕೊಳ್ಳುತ್ತಾ ಬಂತು.

ಈ ಶಾಲೆಯಲ್ಲಿ ಬಂದ ಗುರು ಪರಂಪರೆ ಹಾಗೂ ವಿದ್ಯಾರ್ಥಿ ವರ್ಗ ಆದರ್ಶದ ಪ್ರತೀಕವಾಗಿ ವಿದ್ಯಾರ್ಥಿ ಜೀವನಕ್ಕೆ ತಳಪಾಯವಾಗಬಲ್ಲ ಪ್ರಾಥಮಿಕ ಶಿಕ್ಷಣವನ್ನು ಬದುಕಿನುದ್ದಕ್ಕೂ ಬೆಸುಗೆಯಾಗುವಂತಹ ಸಂಬಂಧ ಅಂದಿನ ಗುರುವರ್ಗದ ಬೋಧನಾ ಕ್ರಮ.

''ಮಕ್ಕಳಿಗೆ ಬಾಲ್ಯದೋಳ್ ಅಕ್ಕರ ವಿದ್ಯೆ ಕಲಿಸದಿದ್ದೊಡೆ ಕೊಂದಂ। ಲಕ್ಕ ಧನವಿರಲು ಕೆಡುಗುಂ। ಚಿಕ್ಕಂದಿನಾ ವಿದ್ಯೆ ಪೊರಗುಂ ಚೂಡಾರತ್ನ...'' ಎಂದು ಸಂಚಿಯ ಹೊನ್ನಮ್ಮ ಹೇಳಿದುದನ್ನು ಗುರುವರ್ಗದವರು ಅರಿತು ಆಚರಣೆಗೆ ಇಳಿಯುತ್ತಿದ್ದರು. ವಿದ್ಯಾರ್ಥಿಗಳಲ್ಲಿ ಕಲಿಯುವ ಉತ್ಸುಕತೆಯನ್ನು ತುಂಬುತ್ತಿದ್ದರು. ಅಕ್ಷರ ಕಲಿಕೆ, ಕಾಗುಣಿತ, ಮಗ್ಗಿ, ಉತ್ತಲೇಖನ ಕಲಿಸುವ ಮೂಲಕ ಹಾಗೂ ಭಾಷಾಜ್ಞಾನಕ್ಕೆ ಪ್ರಾಥಮಿಕ ಹಾಗೂ ಮಾಧ್ಯಮಿಕ ಶಿಕ್ಷಣದಲ್ಲಿ ವಿಶೇಷ ಒತ್ತು ಕೊಡುತ್ತಿದ್ದರು. ಭಾಷೆಯ ಮೇಲೆ ಪ್ರಭುತ್ವ ಬಂದರೆ ಮುಂದಿನ ಅಧ್ಯಯನ ಸುಲಭ ಎಂದು ಅಂದಿನ ಗುರುವರ್ಗ ಅರಿತಿತ್ತು.

ಪ್ರತಿ ತಿಂಗಳಿಗೊಮ್ಮೆ ನಗರದ ಶಿಕ್ಷಕರು ಒಂದೆಡೆ ಸೇರಿ ವಿದ್ಯಾಭ್ಯಾಸ ಕುರಿತ, ಪಠ್ಯ ಪುಸ್ತಕ ವಿಶೇಷ ಕುರಿತ ಬಗ್ಗೆ ಚರ್ಚೆ ಹಾಗೂ ಉಪನ್ಯಾಸ ಗೋಷ್ಠಿಗಳನ್ನು ಏರ್ಪಡಿಸುವ ಪರಿಪಾಠ ಅಂದಿನ ಗುರು ವರ್ಗದಲ್ಲಿತ್ತು. ಸಂಜೆ ಶಾಲಾ ಅವಧಿ ಮುಗಿದ ಮೇಲೆ ಆಯಾ ಶಾಲಾ ಶಿಕ್ಷಕರು ಕುಳಿತು ಶಾಲೆಯ ಅಭಿವೃದ್ಧಿಯ ಬಗ್ಗೆ, ವಿದ್ಯಾರ್ಥಿಗಳ ಅಭ್ಯುದಯದ ಬಗ್ಗೆ ಚರ್ಚಿಸಿ ನಂತರ ಮನೆಗೆ ತೆರಳುತ್ತಿದ್ದರು. ಈಗ ಅಂತಹ ವಾತಾವರಣ ಎಲ್ಲಿದೆ? ಎಂದು ವಯೋವೃದ್ಧ ನಿವೃತ್ತ ಶಿಕ್ಷಕರು ನೊಂದು, ಹೇಳಿದರು. (ಇಂದಿನ ಶಿಕ್ಷಕ - ಅಧ್ಯಾಪಕ ವರ್ಗ ಈ ಬಗ್ಗೆ ತಮ್ಮ ಆತ್ಮ ಪರೀಕ್ಷೆ ಮಾಡಿಕೊಳ್ಳಬೇಕಿದೆ.)

ನಗರದ ಹಳೆ ತಲೆ ಮಾರಿನ ಜನರ ಬಳಿ ಕುಳಿತು ಅವರ ಗುರುಗಳ ಹೆಸರು ಹೇಳಿದರೆ ಸಾಕು ಇಂದಿಗೂ ರೋಮಾಂಚನಗೊಳ್ಳುತ್ತಾರೆ. ಶ್ರದ್ಧಾ ಭಕ್ತಿಯಿಂದ ಅವರು ಕಲಿಸಿದ ರೀತಿಯನ್ನು ಬಣ್ಣಿಸುತ್ತಾರೆ. ಅಂತಹವರಲ್ಲಿ ನಾರಾಯಣ ಶಾಸ್ತ್ರಿ ಮಹಾದೇವಯ್ಯ, ಕೋಗುಂಡಿ ಹಾಲಪ್ಪ ಆರ್. ಕಲ್ಯಾಣಯ್ಯ, ಅ.ರಾ. ಶಂಕರಯ್ಯ, ಸಿದ್ದಗಂಗಯ್ಯ, ಪುಟ್ಟಪ್ಪ, ಗುಂಡುರಾವ್, ಪಿ.ಪಿ. ರುದ್ರಪ್ಪ, ಗಂಗಪ್ಪ ಹೀಗೆ ಅನೇಕರ ಹೆಸರುಗಳು ಸಾಲಾಗಿ ನಿಲ್ಲುತ್ತವೆ. ಪಠ್ಯ ಕ್ರಮದಂತೆ ಶಿಸ್ತು ಕೂಡ ಶಿಕ್ಷಕರು ಹಾಗೂ ವಿದ್ಯಾರ್ಥಿಗಳಲ್ಲಿ ಇರುತ್ತಿತ್ತು. ಶಿಕ್ಷಕರು ಪಂಚೆ-ಕೋಟು, ಪೇಟ ಧರಿಸಿ ಬಂದರೆ ವಿದ್ಯಾರ್ಥಿಗಳು ತಪ್ಪದೆ ಟೋಪಿ ಧರಿಸಿ ಬರಬೇಕಾಗಿತ್ತು.

ನೂರು ವರ್ಷ ತುಂಬಿದ ಈ ಓಲ್ಡ್ ಮಿಡ್ಲ ಸ್ಕೂಲ್‌ನಲ್ಲಿ ಅತಿರಥ ಮಹಾರಥರೆಲ್ಲರೂ ಓದಿದ್ದರು ಈವರೆಗೂ ಒಂದು ಸಮಾರಂಭ ಮಾಡಲಾಗಿಲ್ಲ. ಈ ಹಿಂದೆ 1952ರಲ್ಲಿ ಎಸ್ಸೆನ್ ಅವರನ್ನು ಕರೆ ತಂದು 50 ವರ್ಷದ ಸಮಾರಂಭ ಮಾಡಲು ಹಿರಿಯ ಶಿಕ್ಷಕರಾದ ಅ.ರಾ. ಶಂಕರಯ್ಯ ಯತ್ನಿಸಿದ್ದರಂತೆ. ಅದರೆ ಅಗತ್ಯ ಬೆಂಬಲ ಸಿಗದೆ ನಿಂತು ಹೋಯಿತಂತೆ.

ಇಂದು ಹಳೆಯ ಮಾಧ್ಯಮಿಕ ಶಾಲಾ ಆವರಣ ಹಂದಿಗಳ ತವರು ಮನೆಯಾಗಿದೆ. ಪಕ್ಕದ ಮಾರುಕಟ್ಟೆಯ ಕಸ ಬಿಸಾಕುವ ಬಯಲು ತಿಪ್ಪೆಯಾಗಿದೆ. ಮಳೆಗಾಲದಲ್ಲಂತೂ ನೀವೇ ಊಹಿಸಿಕೊಳ್ಳಿ... ಇದಕ್ಕೆ ಮುಖ್ಯ ಕಾರಣ ಇಂದಿನ ಖಾಸಗಿ ಶಾಲೆಗಳ ಅರ್ಭಟದಲ್ಲಿ ಈ ಶಾಲೆಗೆ ಕೇವಲ ಬಡವರ, ನಿರ್ಗತಿಕರ ಮಕ್ಕಳು ಮಾತ್ರ ಸೇರುತ್ತಾರೆ. ಜೊತೆಗೆ ಸರ್ಕಾರಿ ಶಾಲೆ...! ಯಾರು ಕೇಳಬೇಕು ಹೇಳಿ?

ನಗರದ ಜನ ಸಂಖ್ಯೆ ಬೆಳೆದಂತೆ ಮುಂದೆ ಡಿ.ಇ.ಎ. ಮಿಡ್ಲಸ್ಕೂಲ್, ದುಗ್ಗಮ್ಮನ ದೇವಸ್ಥಾನದ ಬಳಿ ಸಿಟಿ ಮಿಡ್ಲಸ್ಕೂಲ್ ಆರಂಭವಾದವು.

ದ್ವೇಷದಿಂದ ದ್ವೇಷವನ್ನು ಶಮನಮಾಡಲು ಸಾಧ್ಯವಿಲ್ಲ, ಆದರೆ ಪ್ರೀತಿಗೆ ಮಾತ್ರ ಅದು ಸಾಧ್ಯ - ಮಾರ್ಟಿನ್ ಲೂಥರ್ ಕಿಂಗ್.

ಸ್ಟೂಮಿಡ್ಲ ಸ್ಕೂಲ್ ಆರಂಭವಾಯಿತು. ಬಹುಶಃ ಮೇಲಿನ ಶಾಲೆಗಳು ಪ್ರಾರಂಭ ಆದ ಮೇಲೆ ತರಕಾರಿ ಮಾರುಕಟ್ಟೆಯ ಬಳಿಯ ಶಾಲೆಗೆ ಓಲ್ಡ್‌ಮಿಡ್ಲಸ್ಕೂಲ್ ಎಂಬ ಹೆಸರು ಬಂದಿರಬಹುದು ಅನ್ನಿಸುತ್ತೆ.

ಇನ್ನು ಪ್ರೌಢಶಾಲಾ ಮಟ್ಟಕ್ಕೆ ಬಂದರೆ, ಮೊದ ಮೊದಲು ಓಲ್ಡ್ ಮಿಡ್ಲಸ್ಕೂಲ್ (ಅಂದಿನ ಆಂಗ್ಲೋ ವರ್ನಾಕ್ಯುಲರ್ ಶಾಲೆ ಅಥವಾ ಕಾಲೇಜಿಯೆಟ್ ಹೈಸ್ಕೂಲ್) ಕಟ್ಟಡದಲ್ಲಿ ಹೈಸ್ಕೂಲ್ ಶಿಕ್ಷಣ ನಡೆಯುತ್ತಿತ್ತು ಎಂಬ ಮಾಹಿತಿಗಳು ಸಿಗುತ್ತವೆ. ಮುಂದೆ ಜಿಲ್ಲೆಗೊಂದು ಪ್ರೌಢಶಾಲೆಯನ್ನು ಅಂದಿನ ಮೈಸೂರು ಸಂಸ್ಥಾನದ ಎಲ್ಲಾ ಒಂಭತ್ತು ಜಿಲ್ಲೆಗಳಲ್ಲಿ ಒಂದು ಹೈಸ್ಕೂಲ್ ಪ್ರಾರಂಭವಾಗುತ್ತವೆ. ದಾವಣಗೆರೆ ಜಿಲ್ಲಾ ಕೇಂದ್ರ ಅಲ್ಲದಿದ್ದರು ಬಹುದೊಡ್ಡ ನಗರ ಎಂಬ ಕಾರಣದಿಂದಾಗಿ ಮೈಸೂರು ಸಂಸ್ಥಾನದ ಹತ್ತನೇ ಪ್ರೌಢಶಾಲೆಯನ್ನು ಪ್ರಾರಂಭಿಸುತ್ತೆ. ದಾವಣಗೆರೆಯ ಸರ್ಕಾರಿ ಪ್ರೌಢಶಾಲೆಯಾಗಿ 1922ರ ಆಗಸ್ಟ್ 30 ರಂದು ಮೈಸೂರು ದಿವಾನರಾದ ಎ.ಆರ್. ಬ್ಯಾನರ್ಜಿಎಸ್ಕ್ವೈಯರ್ ಅಡಿಗಲ್ಲು ಸಮಾರಂಭ ನೆರವೇರಿ ಸುತ್ತಾರೆ. ಈ ಪ್ರೌಢಶಾಲೆಗೆ ಆಗಿನ ಕಾಲಕ್ಕೆ ವಿದ್ಯಾರ್ಥಿಗಳು ಬರಲು ಹೆದರುತ್ತಿದ್ದರಂತೆ. ವಿಶಾಲ ಪ್ರದೇಶದಲ್ಲಿ ತಲೆ ಎತ್ತಿ ನಿಂತ ಏಕೈಕ ಕಟ್ಟಡ ಇದಾಗಿತ್ತು. ಹೀಗಾಗಿ ಈ ಬೃಹತ್ ಬಯಲಲ್ಲಿ ದೆವ್ವಗಳು ಓಡಾಡುತ್ತವೆ ಎಂದು ವಿದ್ಯಾರ್ಥಿಗಳು ಹೆದರುತ್ತಿದ್ದದ್ದೂ ಉಂಟಂತೆ...!

ಇರುವ ಕಟ್ಟಡ ಸಾಲದು ಎಂಬ ಮಾತು ಬಂದಾಗ ದಾನಿಗಳ ಶಕೆ ಆರಂಭ. ನಗರದ ಶ್ರೀಮಂತ ಮನೆತನಗಳಲ್ಲಿ ಒಂದಾದ ಬಾದಾಮಿಯವರು ಪ್ರೌಢಶಾಲಾ ಕಟ್ಟಡಕ್ಕೆ ಧನ ಸಹಾಯ ನೀಡಲು ಮುಂದಾಗುತ್ತಾರೆ. ಈ ನಗರದಲ್ಲಿ ಬಾದಾಮಿ ಮನೆತನದವರು ವಿಸ್ತೃತ ಕಟ್ಟಡ ಕಟ್ಟಿಕೊಡುವ ಮೂಲಕ ಮತ್ತೆ ಸರ್ಕಾರಿ ಪ್ರೌಢಶಾಲೆ ಬೆಳೆಯುತ್ತದೆ. 10-7-1939 ರಲ್ಲಿ ಬಾದಾಮಿ ಚನ್ನಪ್ಪ ಅವರು ತಂದೆ ಶಿವಬಸಪ್ಪನವರ ಹೆಸರಲ್ಲಿ ದಾನ ನೀಡುತ್ತಾರೆ. ಮತ್ತೆ ಅದೇ ರೀತಿ 2-2-49 ರಲ್ಲಿ ಮತ್ತೊಮ್ಮೆ ಬಾದಾಮಿ ಚನ್ನಪ್ಪನವರೇ ಮೂರನೆಯ ಹಂತದ ಕಟ್ಟಡಕ್ಕೆ ದಾನ ನೀಡುತ್ತಾರೆ. ಮೈಸೂರು ಸಂಸ್ಥಾನದ ಮೆಂಬರ್ ಆಫ್ ಕೌನ್ಸಿಲ್‌ನ ಕೆ.ಎ. ಅನಂತರಾಮ್ ಮತ್ತು ಚಿತ್ರದುರ್ಗದ ಶ್ರೀ ಜಯದೇವ ಜಗದ್ಗುರುಗಳಿಂದ ಅಡಿಗಲ್ಲು ಹಾಕಿಸುತ್ತಾರೆ. ಸರ್ಕಾರಿ ಪ್ರೌಢಶಾಲೆಯಲ್ಲಿ ನೂಲುವ ವಿಭಾಗ ಹಾಗೂ ಕ್ರಾಫ್ಟ್ ವಿಭಾಗ ಕೂಡಾ ಆಗ ನಡೆಯುತ್ತಿದ್ದುದು ಗಮನಾರ್ಹ ಅಂಶ.

ಇದೇ ವೇಳೆಗೆ ದಾವಣಗೆರೆಯಲ್ಲಿ ವಿದ್ಯಾ ಕ್ಷೇತ್ರ ಬೆಳೆದಂತೆ 1942ರಲ್ಲಿ ಪುರಪ್ರೌಢಶಾಲೆ (ಮುನಿಸಿಪಲ್ ಹೈಸ್ಕೂಲ್) ಆರಂಭವಾಗುತ್ತದೆ. ಈ ನಗರದಲ್ಲಿ ಸರ್ಕಾರೇತರ, ಅಂದರೆ ಸ್ಥಳೀಯ ಸಂಸ್ಥೆಯೊಂದು ತೆರೆದ ಮೊದಲ ವಿದ್ಯಾಸಂಸ್ಥೆ ಎಂದು ಹೇಳಲಾಗುತ್ತಿದೆ. ಆರಂಭದಲ್ಲಿ ಪುರಪ್ರೌಢಶಾಲೆ ಈಗ ಪಿ.ಬಿ. ರಸ್ತೆಯಲ್ಲಿರುವ ದಿ. ದಾವಣಗೆರೆ ಅರ್ಬನ್ ಬ್ಯಾಂಕ್ ಕಟ್ಟಡವಿರುವ ಸ್ಥಳದಲ್ಲಿ ನಡೆಯುತ್ತಿತ್ತು. ನಂತರ ಈಗಿನ ನಗರಸಭಾ ಕಾರ್ಯಾಲಯದ ಒಂದು ಪಾರ್ಶ್ವದಲ್ಲಿ ನಡೆಯುತ್ತಿತ್ತು ಎಂದು, ಪುರಪ್ರೌಢಶಾಲೆಯಲ್ಲಿ ಮೂರು ದಶಕಗಳ ಕಾಲ ಜನಪ್ರಿಯ ಶಿಕ್ಷಕರಾಗಿ ಸೇವೆ ಸಲ್ಲಿಸಿ. ಈಗ ದಿವಂಗತ ರಾಗಿರುವ ಬಿ.ಎಂ. ಮುದ್ದಪ್ಪ ಮೇಷ್ಟ್ರು ಹೇಳುತ್ತಿದ್ದರು. ಈಗಿನ ಪ್ರೌಢಶಾಲಾ ಕಟ್ಟಡದಲ್ಲಿ ಪುರಸಭಾ ಕಾರ್ಯಾಲಯ ಹಾಗೂ ತಾಲ್ಲೂಕು ಕಛೇರಿಗಳು ಸ್ವಲ್ಪ ಕಾಲ ಕಾರ್ಯನಿರ್ವಹಿಸಿದವೆಂದು ಹಳೆ ತಲೆಮಾರಿನ ಜನ ನೆನಪಿಸುತ್ತಾರೆ.

ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚು ಹೆಚ್ಚು ಬೆಳೆದಂತೆ ಹತ್ತಿರದ ಊರುಗಳಿಂದ ವಿದ್ಯಾರ್ಥಿಗಳು ಬರತೊಡಗಿದಂತೆ, ಮತ್ತೊಂದು ಪ್ರೌಢಶಾಲೆಯ ಅವಶ್ಯಕತೆ ಬೀಳುತ್ತದೆ. ಅಲ್ಲದೆ ಹಾಸ್ಟೆಲ್‌ಗಳು ಪ್ರಾರಂಭವಾಗಿ ಗ್ರಾಮಾಂತರದ ವಿದ್ಯಾರ್ಥಿಗಳಿಗೆ ವಸತಿ ಸೌಕರ್ಯ ಸಿಗತೊಡಗುತ್ತದೆ. ಹೀಗಾಗಿ ಮತ್ತೊಬ್ಬ ದಾನಿ ಮೋತಿ ವೀರಪ್ಪ ಅವರು 1952ರಲ್ಲಿ "ಮೋತಿ ವೀರಪ್ಪ ಪ್ರೌಢಶಾಲೆ ಕಟ್ಟಡಕ್ಕೆ ಧನ ಸಹಾಯ ನೀಡಿ ಮತ್ತೊಂದು ಪ್ರೌಢಶಾಲೆ ಪ್ರಾರಂಭ ಆಗುವುದಕ್ಕೆ ಕಾರಣಕರ್ತರಾಗುತ್ತಾರೆ." ಮೋತಿ ವೀರಪ್ಪ ಪ್ರೌಢಶಾಲೆಯು ಆರಂಭದಲ್ಲಿ ಅಶೋಕ ಚಿತ್ರ ಮಂದಿರದ ಹಿಂಭಾಗದ ಬಿ.ಟಿ. ಬ್ರಹ್ಮಪ್ಪ ತವನಪ್ಪ ಎಣ್ಣೆ ಗಿರಣಿಗಳ ಗೋಡೌನಲ್ಲಿ ನಡೆಯುತ್ತಿತ್ತು ಎಂದು ಮುದ್ದಪ್ಪ ಮೇಸ್ಟರ್ ಹೇಳುತ್ತಿದ್ದರು.

ಇದಕ್ಕೆ ಮುಂಚೆ 1942ರಲ್ಲೆ ಸ್ತ್ರೀಯರಿಗಾಗಿ ಒಂದು ಪ್ರೌಢಶಾಲೆಯನ್ನು ಆರಂಭಿಸಿ, ಅದು ಈಗಿನ ಶ್ರೀ ಅಕ್ಕಮಹಾದೇವಿ ರಸ್ತೆಯಲ್ಲಿನ ವಕೀಲ ನಾಗರಾಜರಾವ್ ಅವರ ಮನೆ ಹತ್ತಿರ ತಾತ್ಕಾಲಿಕ ಕಟ್ಟಡದಲ್ಲಿ ಕೆಲ ಕಾಲ ನಡೆಯಿತು. 1950ರಲ್ಲಿ ರಾಜನಹಳ್ಳಿ ಹನುಮಂತಪ್ಪ ಅವರು ಶ್ರೀಮತಿ ಸೀತಮ್ಮ ಅವರ ಸ್ಮರಣಾರ್ಥ ಕಟ್ಟಡ ಕಟ್ಟಲು ಧನ ಸಹಾಯ ಮಾಡುತ್ತಾರೆ. 9-4-1950 ರಲ್ಲಿ ಅಂದಿನ ಮೈಸೂರು ಸಂಸ್ಥಾನದ ಮುಖ್ಯಮಂತ್ರಿ ಕೆ. ಚಂಗಲರಾಯರೆಡ್ಡಿ ಕಟ್ಟಡಕ್ಕೆ ಅಡಿಗಲ್ಲನ್ನಿಡುತ್ತಾರೆ. 31-5-1953ರಲ್ಲಿ ಅಂದಿನ ವಿದ್ಯಾ ಹಾಗೂ ಕಾನೂನು ಮಂತ್ರಿ ಎ.ಜಿ. ರಾಮಚಂದ್ರರಾವ್ ರಾಜನಹಳ್ಳಿ ಸೀತಮ್ಮ ಹನುಮಂತಪ್ಪ ಬಾಲಿಕಾ ಪ್ರೌಢಶಾಲೆಯ ಕಟ್ಟಡ ಉದ್ಘಾಟಿಸುತ್ತಾರೆ.

ಹೀಗೆ ದಾವಣಗೆರೆಯಲ್ಲಿ ಒಂದು ಶತಮಾನದಲ್ಲಿ ಚಿಗುರೊಡೆದ ವಿದ್ಯಾ ಕ್ಷೇತ್ರದ ಬೇರುಗಳು ಇಂದು ಬೃಹತ್ ಹೆಮ್ಮರಗಳಾಗಿ ಬೆಳೆಯಲು ಕಾರಣೀಭೂತವಾಗಿವೆ.

ನಗರದ ಹಳೆಯ ಮಾಧ್ಯಮಿಕ ಶಾಲೆಯಲ್ಲಿ ರಾಷ್ಟ್ರ ನಾಯಕ ಎಸ್. ನಿಜಲಿಂಗಪ್ಪನವರು ಸೇರಿದಂತೆ ಈ ಭಾಗದ ಎಲ್ಲ ಹಳೆಯ ತಲೆ ಮಾರಿನವರು ಓದಿದ್ದಾರೆ. ಇಲ್ಲಿ ಓದಿ ಹೋದವರು ಪ್ರಖ್ಯಾತ ವೈದ್ಯರಾಗಿದ್ದಾರೆ. ಇಂಜಿನಿಯರ್‌ಗಳು, ಶಿಕ್ಷಣ ತಜ್ಞರಾಗಿದ್ದಾರೆ. ಯಶಸ್ವೀ ರಾಜಕಾರಣಿ ಗಳಾಗಿದ್ದಾರೆ. ಸರ್ಕಾರಿ ಪ್ರೌಢಶಾಲೆಯಲ್ಲಿ ಜೆ.ಹೆಚ್. ಪಟೇಲ್, ಶಾಮನೂರು ಶಿವಶಂಕರಪ್ಪ, ಎಸ್. ಕೊಟ್ರಬಸಪ್ಪ, ಹರಳೆಣ್ಣೆ ಕೊಟ್ರಬಸಪ್ಪ, ಕೆ. ಮಲ್ಲಪ್ಪ, ಮುದೇಗೌಡ್ರ ವೀರಭದ್ರಪ್ಪ, ಮೋತಿ ವೀರಣ್ಣ, ಸಿ. ಕೇಶವಮೂರ್ತಿ, ಪ್ರೊ॥ ಎಸ್.ಹೆಚ್. ಪಟೇಲ್, ಎಚ್.ಎನ್. ಷಡಾಕ್ಷರಪ್ಪ ಮುಂತಾದವರು ವಿದ್ಯಾಭ್ಯಾಸ ಮಾಡಿದ್ದಾರೆ. ಕರ್ನಾಟಕ ರಾಜ್ಯದ ಮಾಜಿ ಯೋಜನಾ ಆಯೋಗದ ಉಪಾಧ್ಯಕ್ಷರಾಗಿದ್ದ ಪ್ರೊ॥ ಡಿ.ಎಂ. ನಂಜುಂಡಪ್ಪ, ಹಾಲಿ ಬೆಂಗಳೂರು ವಿಶ್ವವಿದ್ಯಾನಿಲಯದ ಕುಲಪತಿ ಕೆ. ಸಿದ್ದಪ್ಪ ಅವರೂ ದಾವಣಗೆರೆ ಮುನಿಸಿಪಲ್ ಹೈಸ್ಕೂಲ್ ವಿದ್ಯಾರ್ಥಿಗಳಾಗಿದ್ದರು. ಮತ್ತೊಂದು ವಿಶೇಷವೆಂದರೆ ಇವರೆಲ್ಲಾ ಹೈಸ್ಕೂಲ್ ಮಟ್ಟದವರೆಗೆ ಕನ್ನಡ ಮಾಧ್ಯಮದಲ್ಲಿ ಕಲಿತವರು. ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿಕೆ ಬೇಕೆನ್ನುವ ಮಂದಿ, ಈ ಮೇಲಿನವರು ಕನ್ನಡದಲ್ಲೇ ಕಲಿತು ಸಾಧನೆ ಮಾಡಿದ್ದನ್ನು ಗಮನಿಸಬಹುದಾಗಿದೆ.

50ರ ದಶಕದ ನಂತರ ದಾವಣಗೆರೆ ವಿದ್ಯಾಕ್ಷೇತ್ರ ನಾಗಾಲೋಟದಲ್ಲಿ ಮುನ್ನಡೆದರು ಗುಣಮಟ್ಟದಲ್ಲಿ ಹಿಂದಿನ ಛಾಪು-ನೈಪುಣ್ಯತೆ ಕಾಣುತ್ತಿಲ್ಲ. ಅಂದು ಜ್ಞಾನ ವೃದ್ಧಿಗಾಗಿ ಶಿಕ್ಷಣ, ಆ ಮೂಲಕ ಬದುಕನ್ನು ಸಾಕಾರಗೊಳಿಸಿಕೊಳ್ಳುವ

ಜನರಿಗೆ ಶಕ್ತಿಯ ಅಭಾವ ಇಲ್ಲ, ಅವರಿಗಿರುವುದು ದೃಢ ಸಂಕಲ್ಪದ ಕೊರತೆ - ವಿಕ್ಟರ್ ಹ್ಯೂಗೊ.

ತತ್ವ ಇತ್ತು. ಇಂದು ವೃತ್ತಿಗಾಗಿ ಶಿಕ್ಷಣ ಎಂಬ ಪರಿಕಲ್ಪನೆ ಬರತೊಡಗಿದಂತೆ ಶಿಕ್ಷಣ ವ್ಯಾಪಾರಿ ಮನೋಭಾವದ ಕಡೆ ತಿರುಗಿತು. ಶಿಕ್ಷಣದಲ್ಲಿನ ಮಾನವೀಯ ಮೌಲ್ಯಗಳು ಮರೆಯಾಗಿ ಬೆಲೆ ಕಟ್ಟುವ ಶಿಕ್ಷಣ ರಾರಾಜಿಸತೊಡಗಿತು. ಇದರಿಂದಾಗಿ ವ್ಯಕ್ತಿಗಳ ಮಧ್ಯದ ಸಾಮರಸ್ಯಗಳು, ಗುರು-ಶಿಷ್ಯ ವರ್ಗದ ಅವಿನಾಭಾವ ಸಂಬಂಧಗಳು ಕುಸಿಯುತ್ತಾ ಬಂದವು. ಒಂದು ಕಡೆ ಶಿಕ್ಷಕ ವರ್ಗದಲ್ಲಿ ಪ್ರೌಢಿಮೆ ಹಾಗೂ ಕರ್ತವ್ಯ ವಿಮುಖತೆ ಕಾಣಿಸಿಕೊಂಡರೆ ಮತ್ತೊಂದೆಡೆ ವಿದ್ಯಾರ್ಥಿ ವರ್ಗ ಸ್ವೇಚ್ಛಾಚಾರದ ದಿಕ್ಕಿಗೆ ತಿರುಗುತ್ತಿರುವುದು ಇನ್ನೂ ದುರಂತ. ಇಂದಿನ ಬಹುತೇಕ ವಿದ್ಯಾರ್ಥಿಗಳಿಗೆ ಶಿಕ್ಷಕರ ಮೇಲಿನ ಭಕ್ತಿ-ಗೌರವಗಳೇ ಇಲ್ಲವಾಗಿದೆ ಎಂದರೆ ತಪ್ಪಗಲಾರದು .ಇಂತಹ ಸ್ಥಿತಿ ಒಂದು ದಿನ ಬರಹುದೆಂದು ನಿರೀಕ್ಷಿಸಿದ್ದ ಅಲ್ಲಮಪ್ರಭು ತಮ್ಮ ಒಂದು ವಚನದಲ್ಲಿ ಹೀಗೆ ಹೇಳುತ್ತಾರೆ.

ಕೃತ ಯುಗದಲ್ಲಿ ಶ್ರೀ ಗುರು ಶಿಷ್ಯಂಗೆ
ಬಡಿದು ಬುದ್ಧಿಯ ಕಲಿಸಿದೆಡೆ
ಆಗಲಿ ಮಹಾಪ್ರಸಾದ ವೆಂಬೆನಯ್ಯ
ತ್ರೇತಾಯುಗದಲ್ಲಿ ಶ್ರೀ ಗುರು ಶಿಷ್ಯಂಗೆ
ಬೈದು ಬುದ್ದಿಯ ಕಲಿಸಿದೊಡೆ ಆಗಲಿ
ಮಹಾಪ್ರಸಾದವೆಂಬೆನಯ್ಯ.
ದ್ವಾಪರ ಯುಗದಲ್ಲಿ ಶ್ರೀ ಗುರುವು
ಶಿಷ್ಯಂಗೆ ಝಂಕಿಸಿ ಬುದ್ದಿಯ ಕಲಿಸಿದೊಡೆ
ಆಗಲಿ ಮಹಾಪ್ರಸಾದವೆಂಬೆನಯ್ಯಾ.
ಕಲಿಯುಗದಲಿ ಶ್ರೀ ಗುರುವು
ಶಿಷ್ಯಂಗೆ ವಂದಿಸಿ ಬುದ್ದಿಯ ಕಲಿಸಿದೊಡೆ
ಆಗಲಿ ಮಹಾಪ್ರಸಾದವೆಂಬೆನಯ್ಯಾ.
ಗುಹೇಶ್ವರ ನಿಮ್ಮ ಕಾಲದ ಕಟ್ಟಳೆಯ
ಕಲಿತನಕೆ ನಾನು ಬೆರಗಾದೆನು.

ಶಿಷ್ಯರ ಮನೋಭಾವ ಈ ರೀತಿ ಆಗುತ್ತಿದ್ದರೆ ಗುರು ವರ್ಗ ತಾವೇನು ಕಡಿಮೆ ಎನ್ನುವಂತೆ ಆಗಿರುವ ಉದಾಹರಣೆಗಳು ನಮ್ಮ ಕಣ್ಣ ಮುಂದಿವೆ. ಶೇ. 30-40 ಭಾಗ ಶಿಕ್ಷಕರನ್ನು ಹೊರತು ಪಡಿಸಿದರೆ ಮಿಕ್ಕವರು ಶಾಲಾ ಪಾಠಕ್ಕಿಂತ ಮನೆ ಪಾಠ ಹೇಳುವುದರಲ್ಲಿ, ವಿದ್ಯಾರ್ಥಿಗಳು ಅನಿವಾರ್ಯವಾಗಿ ಮನೆ ಪಾಠಕ್ಕೆ ಬರುವಂತೆ ಮಾಡುವಲ್ಲಿ ನಿಷ್ಣಾತರಾಗಿದ್ದಾರೆ. ಶಾಲಾ ಕಾಲೇಜು ಮುಗಿದ ಮರುಕ್ಷಣ ಒಂದಲ್ಲೊಂದು ವ್ಯವಹಾರಕ್ಕಿಳಿಯುವ ಶಿಕ್ಷಕರು, ಅಧ್ಯಾಪಕರು ನಮ್ಮ ಕಣ್ಣ ಮುಂದೆ ಇದ್ದಾರೆ. ಇಂತಹ ಶಿಕ್ಷಕರಿಗೆ ಪಾಠ ಪ್ರವಚನಗಳಿಗಿಂತ ತಮ್ಮ ಖಾಸಗಿ ದಂದೆ ಮುಖ್ಯವಾಗುತ್ತಿವೆ.

ಇನ್ನು ಪೋಷಕ ವರ್ಗ ಕೂಡಾ ವಿಭಿನ್ನರುಚಿ ಹೊಂದಿದವರಾಗಿದ್ದಾರೆ. ತಮ್ಮ ಮಕ್ಕಳು ವೈದ್ಯರೇ ಆಗಬೇಕು, ಇಂಜಿನಿಯರ್ ಆಗಬೇಕು ಅಥವಾ ಕಂಪ್ಯೂಟರ್ ಬ್ರೈನೇ ಆಗ ಬೇಕು ಎಂಬುದು ಬಹುತೇಕ ಸ್ಥಿತವಂತ ಪೋಷಕರ ಲೆಕ್ಕಾಚಾರ.

ಈ ಲೆಕ್ಕಾಚಾರದ ನಾಡಿ ಹಿಡಿದ ವ್ಯವಹಾರ ಮನೋಭಾವದ ಶಿಕ್ಷಕ ವರ್ಗ ಮನೆ ಪಾಠದ ಹೊಸ ಸಂಸ್ಕೃತಿ ಹುಟ್ಟು ಹಾಕಲು ಕಾರಣವಾಗಿದೆ. ಇದಕ್ಕೆ ತಕ್ಕಂತೆ ವ್ಯಾಪಾರಿ ಮನೋಭಾವದ ಜನ ನಾಯಿಕೊಡೆಗಳಂತೆ ಶಿಕ್ಷಣ ಸಂಸ್ಥೆಗಳನ್ನು ತೆರೆಯುತ್ತಿದ್ದಾರೆ.ಈ ಎಲ್ಲಾ ಅವತಾರಗಳ ಮಧ್ಯ ಮೇಧಾವಿಗಳನ್ನು ರೂಪಿಸಿದ್ದ ಹಳೆ ಮಾಧ್ಯಮಿಕ ಶಾಲೆಯಂತಹವು ತಮ್ಮ ಹಿರಿಮೆ ಕಳೆದುಕೊಂಡು ಅನಾಥವಾಗುತ್ತಿವೆ. ತಿಪ್ಪೆಗುಂಡಿಗಳಾಗಿ, ಹಂದಿ ಗೂಡುಗಳಾಗಿಬಿಡುತ್ತವೆ. ●

## ಬದುಕು

ಶ್ರೀ ಎಮ್.ಆರ್.ಪಾಟೀಲ
ಎಂ.ಎ. ಬಿಎಡ್. ಎ.ಎಲ್.ಟಿ (ಎಸ್)
ಕಬ್ಬೂರ - ಹಾವೇರಿ.

ಆಶೆ ಇಟಗೊಂಡು ಬಾಳೋಣ ಬಾರೋ ಬದುಕಾ।
ನಿರಾಶೆ ದೂಡೋಣ ಬಹುದೂರ ಪ।
ಗಂಗೆ ತುಂಗೆಯರ ಪಾವನ ಪಥಕ।
ಶೃಂಗಾರ ಶಿರಿದೇವಿಯ ನೆಲಕ।
ಹೆಂಗ ಋಣ ತೀರಿಸಲಿ ಒಂದ ಜಲ್ಮಕ
ಸತ್‌ಸಂಗ ಬಿಡಬಹುದೆ ಕೊನೆತನಕ।1।

ಗಿರಿ ಶಿಖರ ಕಾಣತಾವ ಭರಪೂರಕ।
ಕೈತೋರಿ ಕರಿತಾವ ಮನಃಪೂರಕ।
ನೀರು ನಿಲ್ಸ್ಯಾರೆ ಸಾಗರ ಸಾಗರಕೆ।
ಕರಾಮತ್ತಿನ ವಿದ್ಯುದ್ಧಾರಕ।2।

ಚುಕ್ಕಿ ರಾಕೇಟ ಚಿಮ್ಯಾರ ಬಾಂದಳಕ।
ಕುಕ್ಕಿ ಹೆಕ್ಕಿ ತೆಗಿತಾರ ಭೂಗೋಳಕ।
ಅಕ್ಕ ಪಕ್ಕ ಹೊಂದಿ ಬಾಳೋದಕ।
ನಿಕ್ಕಿ ಮಾಡ್ಯಾರ ಎಲ್ಲರ ಸಂತೋಷ।3।

ಎಷ್ಟು ದೇಶ ತಿ ರುಗಿದರೇನ ಜಗಕ।
ಶ್ರೇಷ್ಠವಾಗಿದೆ ಈರೇಳು ಲೋಕಕ।
ಕಷ್ಟ ಪಟ್ಟು ಬದಲಿಸ್ಯಾರ ಜಾತಕ।
ಇಷ್ಟ ಪಟ್ಟು ಬಾಳೋಣ ನಮ್ಮ ಬದುಕ।4।

ಹೆಚ್ಚು ಹೆಚ್ಚಲಿರುವ ತಂತ್ರಜ್ಞಾನಕ।
ಮೆಚ್ಚಿ ಮೆಚ್ಚಿ ಬರುತಿರುವ ಪ್ರಪಂಚಕ।
ಕೆಚ್ಚು ತೋರಿ ಬದುಕೋಣ ಆದರ್ಶಕ।
ರೊಚ್ಚು ಗಿಚ್ಚು ಯಾತಕ ಬೇಕು ಜೀವಕ।5।

ಹರಸಿ ಹಾಡೋಣ ಸುವರ್ಣ ಕರ್ನಾಟಕ।
ಬೆರತು ನೂಕೋಣ ಸಹಸ್ರಾರು ವರ್ಷಕ।
ಸರಸ ವಿರಸ ಬೆರೆತ ಜೀವ ಸಾರ್ಥಕ।
ತನ್ನರಿವೆ ಗುರುವಾಗಲೆಂಬ ಬದುಕ।6। ●

ಭಾರತ ಸಹಸ್ರಾರು ಕುಡುಕರನ್ನು ಹೊಂದಿರುವುದಕ್ಕಿಂತಲೂ, ಭಿಕ್ಷುಕರ ದೇಶವಾಗಿರುವುದು ಮೇಲು - ಗಾಂಧೀಜಿ.



# ಸ್ಕೌಟಿಂಗ್ ಮತ್ತು ನನ್ನ ಅನುಭವ


ಚೆಂಬಗಿ ಶರಣಪ್ಪ

ಬಿ.ಎಸ್ಸಿ, ಬಿ.ಕಾಂ. ಎಲ್.ಎಲ್.ಬಿ.

ಜಿಲ್ಲಾ ಮುಖ್ಯ ಆಯುಕ್ತರು,

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಾವಣಗೆರೆ.


1952-53 ನಾನು ಹೈಸ್ಕೂಲಿನಲ್ಲಿ ಓದುತ್ತಿರುವಾಗ ನನ್ನ ವಿದ್ಯಾಗುರುಗಳಾಗಿದ್ದ ಸನ್ಮಾನ್ಯ ಶ್ರೀ ಎಸ್. ಕೊಟ್ರಬಸಪ್ಪನವರ ನೇತೃತ್ವದಲ್ಲಿ ಆಗಿನ ಪೋರ್ಚುಗೀಸ್ ಆಡಳಿತದಲ್ಲಿದ್ದ ಗೋವಾದಲ್ಲಿ ನಡೆದ ಮೇಳದಲ್ಲಿ ಭಾಗವಹಿಸಿದ್ದು ಅತ್ಯಂತ ರೋಮಾಂಚನಕಾರಿಯಾಗಿತ್ತು, ಕಾರಣ ನಾವು ಯುನಿಫಾರಂನಲ್ಲಿ ಪೋರ್ಚುಗೀಸ್ ಆಡಳಿತದಲ್ಲಿದ್ದ ಗೋವಾದಲ್ಲಿ ಸ್ಕೌಟ್‌ನ ವಿದ್ಯಾರ್ಥಿಗಳಿಗೆ ಅಲ್ಲಿನ ನಾಗರೀಕರು ತೋರಿಸಿದ ಗೌರವ ಮತ್ತು ಅಭಿಮಾನ ಇಂದಿಗೂ ಮರೆಯುವ ಹಾಗಿಲ್ಲ. ಅಷ್ಟೇ ಅಲ್ಲದೇ ಗೋವಾಕ್ಕೆ ಅದೇ ತಾನೇ ಬಂದಿದ್ದ ಹಡಗಿನಲ್ಲಿ ನಮ್ಮನ್ನು ಆಹ್ವಾನಿಸಿ, ಊಟೋಪಚಾರ ಮಾಡಿಸಿದ್ದಲ್ಲದೇ ಗೋವಾದ ರಾಜಧಾನಿ ಪಣಜಿ, ವಾಸ್ಕೋ, ಮಾರ್ಗೋವ, ಚರ್ಚ ಮುಂತಾದ ಅನೇಕ ಪ್ರೇಕ್ಷಣೀಯ ಸ್ಥಳಗಳನ್ನು ವೀಕ್ಷಿಸಲು ಅವಕಾಶ ಮಾಡಿಕೊಟ್ಟಿದ್ದನ್ನು ಇಂದಿಗೂ ಸ್ಮರಿಸಬೇಕು. ಇಂತಹ ಅವಕಾಶ ಮಾಡಿಕೊಟ್ಟ ಸ್ಕೌಟ್ ಸಂಸ್ಥೆಯ ಧ್ಯೇಯ, ಧೋರಣೆಗಳನ್ನು ಜೀವನದಲ್ಲಿ ಅಳವಡಿಸಿಕೊಂಡು ನಮ್ಮ ಭವಿಷ್ಯವನ್ನು ನಾನೇ ರೂಪಿಸಿಕೊಳ್ಳುವಂತೆ ತರಬೇತಿ ಕೊಟ್ಟ ಸ್ಕೌಟ್‌ನ ಸಂಸ್ಥೆಗೆ ಮತ್ತು ಆಗಿನ ಸ್ಕೌಟನ ಲೀಡರ್ ಆಗಿದ್ದ ಸನ್ಮಾನ್ಯ ಎಸ್.ಕೊಟ್ರಬಸಪ್ಪನವರಿಗೆ ಕೃತಜ್ಞತೆಗಳು.

ಶಿಸ್ತು, ಸಂಯಮ, ಸಮಯ ಪರಿಪಾಲನೆ, ಜಾತ್ಯತೀತತೆ, ಧ್ಯೇಯ, ಸಾಹಸ, ಸ್ನೇಹ ಪರಿಪಾಲನೆ, ಸಮಾಜಸೇವೆ, ರಾಷ್ಟ್ರಸೇವೆ, ದಲಿತರಿಗೆ ಸಹಾಯ ಮಾಡುವುದು ಇಂತಹ ಅನೇಕ ವಿಷಯಗಳ ಬಗ್ಗೆ ತರಬೇತಿಯನ್ನು ಕೊಡುವುದರೊಂದಿಗೆ ವಿದ್ಯಾರ್ಥಿಗಳು ತಮ್ಮ ಚಿಕ್ಕ ವಯಸ್ಸಿನಲ್ಲಿಯೇ ಪರಿಶುದ್ಧವಾದ ಜೀವನ ನಡೆಸಲು ಸಹಾಯಕಾರಿಯಾಗುವಂತಹ ವಾತಾವರಣವನ್ನು ನಿರ್ಮಾಣ ಮಾಡುತ್ತಿರುವುದು ಈ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆ.

ಸುಮಾರು 44 ವರ್ಷಗಳ ನಂತರ ಅಂದರೆ 1996 ರಿಂದ ಅನಿರೀಕ್ಷಿತವಾಗಿ, ದಾವಣಗೆರೆಯಲ್ಲಿ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಗೆ ಆಯುಕ್ತರಾಗಿ ನಂತರ 2003 ರಿಂದ ದಾವಣಗೆರೆ ಜಿಲ್ಲಾ ಮುಖ್ಯ ಆಯುಕ್ತರಾಗಿ ಸೇವೆ ಸಲ್ಲಿಸುವ ಅವಕಾಶವನ್ನು ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೆ.ಬಿ. ಪಾಣೆಯವರು, ಶ್ರೀಮತಿ ಗುಂಡಿ ವನಜಾಕ್ಷಮ್ಮನವರು ಶ್ರೀ ಗುರುಸ್ವಾಮಿಯವರು ಮತ್ತು ಶ್ರೀ ಮುರುಘರಾಜೇಂದ್ರ ಜಿ.ಚಿಗಟೇರಿ ಮುಂತಾದವರು ಮಾಡಿಕೊಟ್ಟರು. ಇವರಿಗೆ ನಾನು ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.

ಈ ಅವಧಿಯಲ್ಲಿ ನಗರದ ದಾನಿಗಳಾದ ಧರ್ಮರತ್ನಾಕರ ರಾಜನಹಳ್ಳಿ ಮದ್ದುರಾಯಪ್ಪನವರು 1945ರಲ್ಲಿ ಕಟ್ಟಿಸಿದ ಸ್ಕೌಟ್ ಭವನದ ಜಾಗದಲ್ಲೆ 1996 ರಲ್ಲಿ ದಾನಿಗಳಾದ ದಿ॥ ಜೆ.ಎಸ್.ಪ್ರಕಾಶ್‌ರವರು ಕಟ್ಟಿಸಿದ ಆಡಳಿತ ಕಛೇರಿ ಮತ್ತು ಶ್ರೀಯುತ ಅಥಣಿ ಕೊಟ್ರೇಶ್‌ರವರು ಈ ಸಂಸ್ಥೆಯ ಅಧ್ಯಕ್ಷರಾಗಿ 2002ರಲ್ಲಿ ಬಂದ ನಂತರ ಶ್ರೀ ಮುರುಘರಾಜೇಂದ್ರ ಜೆ.ಚಿಗಟೇರಿ ಜಿಲ್ಲಾ ಸ್ಕೌಟ್ ಆಯುಕ್ತರು, ಶ್ರೀಯುತ ಷಡಾಕ್ಷರಪ್ಪನವರು, ಜಿಲ್ಲಾ ಖಜಾಂಚಿ, ಗೈಡ್ ಕಮೀಷನರ್ ಶ್ರೀಮತಿ ಶಾಂತಾ ಯಾವಗಲ್ ಮತ್ತು ಇತರ ಎಲ್ಲಾ ಪದಾಧಿಕಾರಿಗಳ ಸಹಕಾರದಿಂದ ಸ್ಕೌಟ್ ಭವನದ ಮುಂದೆ ವಾಣಿಜ್ಯ ಸಂಕೀರ್ಣವನ್ನು ಸುಮಾರು 35 ಲಕ್ಷ ರೂಪಾಯಿ ವೆಚ್ಚದಲ್ಲಿ ಕಟ್ಟಿಸಿ ಸಂಸ್ಥೆ ತನ್ನ ಸ್ವಂತ ಆದಾಯದಿಂದ ಸ್ಕೌಟ್ ಮತ್ತು ಗೈಡ್ಸ್‌ನ ಎಲ್ಲಾ ಚಟುವಟಿಕೆಗಳನ್ನು ನಿರ್ವಹಿಸಿಕೊಂಡು ಹೋಗುವಂತೆ ಆಗಿರುವುದು ಹೆಮ್ಮೆಪಡುವ ವಿಷಯವಾಗಿದ್ದು, ಇದಕ್ಕಾಗಿ ಸಂಸ್ಥೆಯ ಎಲ್ಲಾ ಪದಾಧಿಕಾರಿಗಳಿಗೂ ನಾನು ಕೃತಜ್ಞನಾಗಿದ್ದೇನೆ.

ಇದರ ಜೊತೆಯಲ್ಲಿ ಸ್ಕೌಟ್ ಮತ್ತು ಗೈಡ್ಸ್ ಮಕ್ಕಳಿಗೆ ತರಬೇತಿ ಕೊಡುವುದರೊಂದಿಗೆ 1996ರಲ್ಲಿ ಕೇವಲ 4000 ಇದ್ದ ವಿದ್ಯಾರ್ಥಿಗಳು ಈಗ ಸುಮಾರು 15000 ಮಕ್ಕಳು ಆಗಿರುವುದು ಹೆಮ್ಮೆಯ ವಿಷಯ. ಇದಕ್ಕಾಗಿ ತರಬೇತಿ ಕೊಡುತ್ತಿರುವ ಶ್ರೀಯುತ ವಾಸಿಲ್ ರವರು ಎಎಸ್‌ಓಸಿ. ಶ್ರೀಮತಿ ಮಂಜುಳಾರವರು, ನೂರುಲ್ಲಾ ಮತ್ತು ಕಾರ್ಯದರ್ಶಿಗಳಾದ ಕುಬೇರಪ್ಪ ಮತ್ತು ಚನ್ನಬಸಪ್ಪ, ಜಂಟಿ ಕಾರ್ಯದರ್ಶಿ ಶ್ರೀಮತಿ ಸಖುವಾಣಿ ಇವರೆಲ್ಲರಿಗೂ ನಾನು ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತೇನೆ.

ಇವರುಗಳೆಲ್ಲರ ನೇತೃತ್ವದಲ್ಲಿ ದಾವಣಗೆರೆಯಲ್ಲಿ ಪ್ರಥಮ ಬಾರಿಗೆ ನಡೆಯುತ್ತಿರುವ ರಜತಮಹೋತ್ಸವ ಜಾಂಬೋರೇಟ್ ಯಶಸ್ವಿಯಾಗಲೆಂದು ಹಾರೈಸುತ್ತೇನೆ. ●

**ಈ ಹಕ್ಕುಗಳನ್ನು ಪಡೆಯೋಣ :**

ಸಮಾನತೆ

ಧಾರ್ಮಿಕತೆ

ಶೋಷಣೆ ವಿರುದ್ಧ ಹಕ್ಕು

ಸಾಂಸ್ಕೃತಿಕ ಹಕ್ಕು

ಶೈಕ್ಷಣಿಕ ಹಕ್ಕು

ಸಂವಿಧಾನ ಪಾರಿಹಾರಿಕ ಹಕ್ಕು.

ಅವಕಾಶಗಳ ಹಕ್ಕು ●

ನಮಗೆ ಹೀಗೆ ಮಾಡಲು
ಗೈಡಿಂಗ್ ಚಳವಳಿಯು
ಮಾನಸಿಕ, ದೈಹಿಕ, ನೈತಿಕ
ಸಾಮರ್ಥ್ಯಗಳನ್ನು
ಅಭಿವೃದ್ಧಿಗೊಳಿಸುತ್ತದ. ●

ಆಲೋಚನೆಯಂತೆ ಕ್ರಿಯೆ, ಕ್ರಿಯೆಯಂತೆ ಚಾರಿತ್ರ್ಯ, ಚಾರಿತ್ರ್ಯದಂತೆ ಯಶಸ್ಸು - ಸ್ಟೀಫನ್ ಆರ್.ಕೋವೆ.



# ಮಕ್ಕಳ ವಿಷಯದಲ್ಲಿ ಶಿಕ್ಷಕರ ಪಾತ್ರ

ಡಾ|| ಕೆ.ಹೆಚ್. ಪಂಚಾಕ್ಷರಪ್ಪ,
ಅಧ್ಯಕ್ಷರು,
ದಕ್ಷಿಣ ವಲಯ,ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ದಾವಣಗೆರೆ.

ಮಕ್ಕಳ ದೈಹಿಕ, ಮಾನಸಿಕ ಮತ್ತು ಭಾವನಾತ್ಮಕ ವಿಕಾಸವನ್ನು ಸಾಧಿಸುವುದು, ಅಭಿವೃದ್ಧಿಯ ಮೊಟ್ಟಮೊದಲ ಆದ್ಯತೆಯಾಗಿರಬೇಕು. ಇದಕ್ಕಿಂತ ಮಿಗಿಲಾದ ಮಾನವೀಯ ಧ್ಯೇಯ ಮತ್ತಾವುದೂ ಇರಲಾರದು. ನಾವು ನಮ್ಮ ಭವ್ಯ ಭವಿಷಕ್ಕಾಗಿ ಇದಕ್ಕಿಂತ ಉತ್ತಮ ಬಂಡವಾಳ ಯಾವುದನ್ನೂ ಹೂಡಲಾರೆವು.

2) ಪ್ರಾಥಮಿಕ ಆರೈಕೆ ಮತ್ತು ಶಿಕ್ಷಣ ಹಾಗೂ ಸುರಕ್ಷಿತ ನೀರು ಮತ್ತು ನೈರ್ಮಲ್ಯ ವ್ಯವಸ್ಥೆ ಕಾಪಾಡಿಕೊಳ್ಳುವ ಬಗ್ಗೆ ಪೋಷಕರಿಗೆ ಮಾರ್ಗದರ್ಶನ ನೀಡುವುದು. ಏಕೆಂದರೆ, ವಿಶ್ವದಲ್ಲಿ ಈಗ ಸಾಯುತ್ತಿರುವ ಮಕ್ಕಳಲ್ಲಿ ಅರ್ಧದಷ್ಟು ಮಕ್ಕಳು ಲಸಿಕೆ ಅಥವಾ ಚುಚ್ಚುಮದ್ದುಗಳಿಂದ ನಿವಾರಿಸಬಹುದಾದ ರೋಗಗಳಿಗೆ ಬಲಿಯಾಗುತ್ತಿವೆ. ಇಲ್ಲವೆ, ಅತಿಸಾರದಿಂದ ಶರೀರ ನಿರ್ಜಲವಾಗಿ ಸಾಯುತ್ತಿವೆ. ವಿಶ್ವದ ಸುಮಾರು ಅರ್ಧದಷ್ಟು ಮಕ್ಕಳಲ್ಲಿನ ನ್ಯೂನ ಪೋಷಣೆ ಅಥವಾ ಅಪೋಷಣೆಗೆ ಇವೇ ಅಂಶಗಳು ಮುಖ್ಯ ಕಾರಣವಾಗಿವೆ. ಮಕ್ಕಳು ಈ ರೀತಿ ಸಾಯುವುದನ್ನು ಇಲ್ಲವೆ ನ್ಯೂನಪೋಷಣೆಗೆ ಒಳಗಾಗುವುದನ್ನು ತಪ್ಪಿಸಲು, ಈಗ ನಮ್ಮ ಬಳಿ ತೀರ ಸರಳವಾದ ಮತ್ತು ಅಲ್ಪ ವೆಚ್ಚದ ವಿಧಾನಗಳಿರುವುದನ್ನು ಮನದಟ್ಟು ಮಾಡುವುದು.

3) ಒಂದು ಪೀಳಿಗೆಯಿಂದ ಇನ್ನೊಂದು ಪೀಳಿಗೆಗೆ ಬಡತನವನ್ನು ಬೆಳೆಸಿಕೊಂಡು ಹೋಗುವ ಸ್ಥಿತಿಯನ್ನು ನಿವಾರಿಸಲು, ಬೆಳೆಯುತ್ತಿರುವ ಮಕ್ಕಳ ದೇಹ ಹಾಗೂ ಬುದ್ಧಿಗೆ ರಕ್ಷಣೆ ಒದಗಿಸುವುದಕ್ಕೆ ಆದ್ಯತೆ ನೀಡಬೇಕು. ಇದಕ್ಕಿಂತ ಮುಖ್ಯವೆನಿಸುವ ಮಾನವೀಯ ಉದ್ದೇಶ ಬೇರಾವುದೂ ಇರಲು ಸಾಧ್ಯವಿಲ್ಲ. ಇದಕ್ಕಿಂತ ಮಿಗಿಲಾದ ಉತ್ಪಾದಕ ಬಂಡವಾಳವಿಲ್ಲ, ಆದುದರಿಂದ ಅರ್ಥಪೂರ್ಣ ಅಭಿವೃದ್ಧಿ ಸಾಧಿಸುವಲ್ಲಿ ಶಿಕ್ಷಕರು ಕೂಡ ಮಹತ್ವದ ಪಾತ್ರ ವಹಿಸಬೇಕು.

ಮಾತೆಯರಿಗೆ ಶಿಕ್ಷಕರಿಂದ ಮಾರ್ಗದರ್ಶನ :

1) ಜನನ ಕಾಲದಲ್ಲಿ ಉಂಟಾಗುವ ಅಪಾಯಗಳನ್ನು ಕಡಿಮೆ ಮಾಡುವ ಸಲುವಾಗಿ ಜನನ ಪೂರ್ವ ತಪಾಸಣೆಗೆಂದು ಆರೋಗ್ಯ ಕಾರ್ಯಕರ್ತರನ್ನು ಕಾಣುವಂತೆ ಮನವೊಲಿಸಬೇಕು.

2) ಮಕ್ಕಳ ಜನನದ ನಡುವಿನ ಅಂತರ ಕನಿಷ್ಟ ಮೂರು ವರ್ಷ ಇರಬೇಕೆನ್ನುವುದನ್ನು ತಿಳಿಸಬೇಕು.

3) ಮಗುವಿಗೆ ಮೊದಲ ಕೆಲವು ತಿಂಗಳು ಎದೆ ಹಾಲು ಆಹಾರವಾಗಬೇಕು. ಅದರ ವಯಸ್ಸು ನಾಲ್ಕರಿಂದ ಆರು ತಿಂಗಳು ಇರುವಾಗ ಎದೆ ಹಾಲಿನ ಜೊತೆಗೆ ಬೇರೆಯ ಆಹಾರವನ್ನು ಕೊಡುವಂತೆ ತಿಳಿಸಬೇಕು.

4) ಮಗುವಿನ ಬೆಳವಣಿಗೆಯನ್ನು ಕುಂಠಿತಗೊಳಿಸುವ, ಅವನ್ನು ಅಂಗವಿಕಲರಾಗಿ ಮಾಡುವ, ಸಾವನ್ನುಂಟುಮಾಡುವ ಹಲವು ರೀತಿಯ ಕಾಯಿಲೆಗಳಿಂದ ಮಕ್ಕಳಿಗೆ ರಕ್ಷಣೆ ನೀಡಲು, ಚಿಕಿತ್ಸೆಯನ್ನು ಒದಗಿಸುವಂತೆ ಮನವೊಲಿಸಬೇಕು.

5) ಶಿಶು ಮರಣ ಮತ್ತು ಕಡಿಮೆ ತೂಕದ ಮಕ್ಕಳ ಜನನ ಪ್ರಮಾಣದಲ್ಲಿ ಆಗಿರುವ ಹೆಚ್ಚಳ, ಐದು ವರ್ಷಕ್ಕಿಂತ ಕಡಿಮೆ ವಯಸ್ಸಿನ ಮಕ್ಕಳ ಸರಾಸರಿ ಎತ್ತರ ಮತ್ತು ತೂಕದ ಅನುಪಾತದಲ್ಲಿನ ಕುಸಿತ ಮತ್ತು ಶಾಲೆಗಳಲ್ಲಿನ ಮಕ್ಕಳ ದಾಖಲಾತಿಯಲ್ಲಿನ ಇಳಿತ ಇವುಗಳ ಬಗ್ಗೆ ಎಚ್ಚರಿಕೆ ವಹಿಸಲು ಮಾತೆಯರಿಗೆ ಸರಿಯಾದ ಮಾರ್ಗದರ್ಶನ ಅವಶ್ಯವಿರುತ್ತದೆ.

ಸಮುದಾಯ ಆರೋಗ್ಯ ಕಾಪಾಡುವಲ್ಲಿ ಶಿಕ್ಷಕರ ಪಾತ್ರ.

ಸಮಾಜದಲ್ಲಿ ಶಿಕ್ಷಕರ ಸ್ಥಾನ ಮಾನ ಉನ್ನತ ಮಟ್ಟದಲ್ಲಿದ್ದು, ಅವರ ಆಚಾರ ವಿಚಾರಗಳಿಗೆ ಜನಮನ್ನಣೆ ಇದೆ. ಆದುದರಿಂದ ಅವರು ವಿದ್ಯಾರ್ಥಿಗಳಿಗೆ ಸಂದರ್ಭಕ್ಕನುಗುಣವಾಗಿ ಆರೋಗ್ಯ ಶಿಕ್ಷಣವನ್ನು ನೀಡಿದರೆ. ಅದು ಪರಿಣಾಮಕಾರಿಯಾಗುತ್ತದೆ.

ವೈಯಕ್ತಿಕ ಶುಚಿತ್ವ:- 1) ಮುಖ ತೊಳೆಯುವುದು.

2) ಹಲ್ಲುಗಳನ್ನು ಉಜ್ಜುವುದು.

3) ತಲೆಯನ್ನು ತೊಳೆದುಕೊಂಡು, ಕೂದಲುಗಳಿಗೆ ಎಣ್ಣೆ ಹಾಕಿ ಬಾಚಿಕೊಳ್ಳುವುದು.

4) ಉಗುರುಗಳನ್ನು ಸರಿಯಾದ ರೀತಿಯಲ್ಲಿ ಕತ್ತರಿಸಿಕೊಳ್ಳುವುದು.

5) ಕಕ್ಕಸಿಗೆ ಹೋಗಿ ಬಂದ ಮೇಲೆ ಸೋಪು ಹಚ್ಚಿ ಕೈಗಳನ್ನು ತೊಳೆದುಕೊಳ್ಳುವುದು.

6) ಆಹಾರ ಸೇವಿಸುವುದಕ್ಕೆ ಮೊದಲು ಸೋಪು ಹಚ್ಚಿ ಕೈಗಳನ್ನು ತೊಳೆದುಕೊಳ್ಳುವುದು.

7) ಕೆಮ್ಮುವಾಗ ಅಥವಾ ಸೀನುವಾಗ ಕರವಸ್ತ್ರದಿಂದ ಅಥವಾ ಕೈಗಳಿಂದ ಮುಚ್ಚಿಕೊಳ್ಳುವುದು.

ಚಿಕ್ಕವಯಸ್ಸಿನಲ್ಲಿ ಕಲಿತ ಉತ್ತಮ ಆರೋಗ್ಯ ಅಭ್ಯಾಸಗಳು ಜೀವನ ಪರ್ಯಂತ ಇರುತ್ತದೆ.

ಉತ್ತಮ ಪರಿಸರ : 1) ಶುದ್ಧವಾದ ನೀರನ್ನು ಉಪಯೋಗಿಸುವುದರಿಂದ ಅನೇಕ ಸಾಂಕ್ರಾಮಿಕ ರೋಗಗಳನ್ನು ತಡೆಗಟ್ಟಬಹುದು.

2) ಉತ್ತಮ ಗಾಳಿ-ಬೆಳಕು ಬರುವಂತೆ ಮನೆಗಳನ್ನು ನಿರ್ಮಿಸಿಕೊಳ್ಳುವುದು.

3) ಮನೆಯ ಸುತ್ತ ತಿಪ್ಪೇಗುಂಡಿ ಅಥವಾ ಕೊಚ್ಚೆಗುಂಡಿ ಇರದಂತೆ ನೋಡಿಕೊಳ್ಳುವುದು, ಸೊಳ್ಳೆ, ನೊಣಗಳು ವೃದ್ಧಿಯಾಗದಂತೆ ತಡೆಗಟ್ಟುವುದು.

4) ಚಿಕ್ಕಮಕ್ಕಳಿಂದ ದೊಡ್ಡವರೆಲ್ಲರೂ ಕಕ್ಕಸುಗಳನ್ನು

ನೀನು ನಿದ್ರಿಸುವ ಸಮಯ ಯಾವಾಗ ತಗ್ಗುತ್ತದೋ, ಆಗಲೇ ನೀನು ಒಬ್ಬ ಮೇಧಾವಿಯಾಗುತ್ತೀಯ - ಪ್ಲೇಟೋ.

ಉಪಯೋಗಿಸಬೇಕು.

ಕುಟುಂಬ ಜೀವನ : 1) ಎಲ್ಲರೂ ಒಟ್ಟಿಗೆ ಊಟ ಮಾಡುವುದು, ವಿನೋದ ಹಾಗೂ ಮನೋರಂಜನಾ ಕಾರ್ಯಕ್ರಮಗಳಲ್ಲಿ ಭಾಗಿಗಳಾಗುವುದು. ಪರಸ್ಪರ ಸಹಕಾರ ಹಾಗೂ ಸಹಾನುಭೂತಿ ತೋರಿಸಬೇಕೆನ್ನುವುದು.

2) ಸೂಕ್ಷ್ಮವಾಗಿ ಲೈಂಗಿಕ ಶಿಕ್ಷಣ ನೀಡುವುದು.

ಆಹಾರ :- 1) ಸಮತೋಲನ ಆಹಾರ ಚಿಕ್ಕವರಿಂದ ದೊಡ್ಡವರವರೆಗೆ ಬೇಕೇ ಬೇಕು.

2) ತರಕಾರಿ ಮತ್ತು ಹಣ್ಣುಗಳು ತುಂಬಾ ಅವಶ್ಯಕ. ಹಣ್ಣುಗಳು ತಿನ್ನಲು ರುಚಿಕರ ಅಲ್ಲದೇ, ಆರೋಗ್ಯಕರವೂ ಆಗಿರುತ್ತದೆ. ಹಣ್ಣುಗಳಲ್ಲಿರುವ ಅನ್ನಾಂಗಗಳಿಗೂ ಮತ್ತು ಲೋಹ ಸತ್ವಗಳಿಗೂ ತುಂಬಾ ಪ್ರಾಧಾನ್ಯವಿದೆ. ಅವುಗಳಲ್ಲಿರುವ ನಾರು ವಸ್ತುಗಳು ಸುಖವಾದ ಮಲವಿಸರ್ಜನೆಗೆ ಸಹಕಾರಿಯಾಗಿವೆ.

ಶಾಲೆಗಳಲ್ಲಿ ವಿದ್ಯಾರ್ಥಿಗಳ ಆರೋಗ್ಯ ಕಾಪಾಡಲು ಮಾಡಬೇಕಾದ ವ್ಯವಸ್ಥೆ :-

1) ಉತ್ತಮ ಆಸನದ ವ್ಯವಸ್ಥೆ.

2) ಉತ್ತಮ ಗಾಳಿ-ಬೆಳಕು.

3) ಸಂಖ್ಯೆಗನುಗುಣವಾಗಿ ಮೂತ್ರಿ ಹಾಗೂ ಕಕ್ಕಸುಗಳು.

4) ವಿಶಾಲವಾದ ಆಟದ ಬಯಲು.

5) ಸ್ವಚ್ಛ ಹಾಗೂ ಶುದ್ಧವಾದ ಕುಡಿಯುವ ನೀರಿನ ವ್ಯವಸ್ಥೆ.

6) ಶಾಲೆಯ ಸುತ್ತಮುತ್ತ ವಾಯು ಹಾಗೂ ಶಬ್ದ ಮಾಲಿನ್ಯತೆ ಇರಬಾರದು.

7) ಮಕ್ಕಳು ಗಿಡ-ಮರಗಳನ್ನು ಪ್ರೀತಿಸಿ ಬೆಳೆಸುವಂತೆ ಮಾಡಬೇಕು.

ಪರಿಸರ ಸಮತೋಲನ :- ''ಪರಿಸರ ಪ್ರಜ್ಞೆ ಬೆಳೆಸಿಕೊಳ್ಳಿ'' ಅರಣ್ಯಗಳ ಮೇಲಿನ ಜನರ ಅವಲಂಬನೆ ಕಡಿಮೆಯಾಗಬೇಕು. ನೈಸರ್ಗಿಕ ಸಂಪನ್ಮೂಲಗಳ ಮಿತ ಬಳಕೆಯಾಗಬೇಕು. ಮನುಷ್ಯನಲ್ಲಿ ಹೆಚ್ಚುತ್ತಿರುವ ದುರಾಸೆ ಪರಿಸರ ಸಮತೋಲನ ಪ್ರಜ್ಞೆ ಅಭಾವವೇ ಮನು ಕುಲದ ವಿನಾಶಕ್ಕೆ ಕಾರಣವಾಗುತ್ತದೆ. ●



## ರಾಷ್ಟ್ರಪ್ರೇಮ

ಬಿ.ವಿ.ಸ್ವಾಮಿ,
ನಿವೃತ್ತ ಪೊಲೀಸ್ ಮುಖ್ಯ ಪೇದೆ
ದಾವಣಗೆರೆ.

ಬನ್ನಿರಯ್ಯ ಬಾಲರೇ
ವೀರರೇ ಧೀರರೇ
ಚಿನ್ನದ ನಾಡ ಕಟ್ಟುವ
ರಾಷ್ಟ್ರಕಾಗಿ ದುಡಿಯುವ

ಒಂದೆ ದೇಶದಲ್ಲಿಯೇ
ಒಂದೆ ಭಾಷೆಯಲ್ಲಿಯೇ
ಒಂದೆ ಉದರದಲ್ಲಿಯೇ
ಬೆಳೆದುದಿಲ್ಲಿಯೇ ಹುಟ್ಟಿ

ಹಿಂದೂ, ಮುಸ್ಲಿಂ, ಕ್ರೈಸ್ತರೆಲ್ಲ
ಭಾರತಾಂಬೆಯ ಮಕ್ಕಳೆಂಬ
ತತ್ವ ರಿತು ಒಂದು ಗೂಡಿ ಬಾಳುವ
ದೇಶ ಸೇವೆಯೇ ಈಶ ಸೇವೆಯೆಂಬ
ನೀತಿ ಅರಿತು ದೇಶಕಾಗಿ ದುಡಿಯುವ

ಮಠ ಮಂದಿರ ಮಸೀದಿಗಳೆಲ್ಲ
ನಮ್ಮವೆಂಬ ನೀತಿ ಪಾಠ ಕಲಿಯುವ
ನೀನು ಕೀಳು ನಾನು ಮೇಲು ಎಂಬ
ಹೊಲಸು ತೊಳೆಯುವ

ನಮ್ಮ ನೆಲ, ನಮ್ಮ ಜಲ
ಒಂದೆ ಎಂಬ ಹೃದಯ ಭಾವದಿಂದ
ಕೂಡಿಬಾಳುವ

ನಿಮ್ಮ ರಕ್ತ ನಮ್ಮ ರಕ್ತವೆಲ್ಲ
ಒಂದೆ ಕೆಂಪು ಎನ್ನುವ
ಜಾತಿ ದ್ವೇಷ ಮಾರ್ಗ ತೊರೆದು
ದೇಶಕಾಗಿ ದುಡಿಯುವ

ಬನ್ನಿರಯ್ಯ ಬಾಲರೇ
ವೀರರೇ ಧೀರರೇ
ಚಿನ್ನದ ನಾಡ ಕಟ್ಟುವ
ರಾಷ್ಟ್ರಕಾಗಿ ದುಡಿಯುವ ●

ನೀವು ಮುಂದುವರಿದು ಸಾಗಬೇಕಾದರೆ, ಆಗಾಗ ಹಿಂದಿರುಗಿ ನೋಡಬೇಕು - ಕಮಿಂಗ್ಸ್.



# ದಾವಣಗೆರೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ನಡೆದು ಬಂದ ದಾರಿ

ಶಾಂತ ಎಸ್.ಯಾವಗಲ್
ಜಿಲ್ಲಾ ಗೈಡ್ ಆಯುಕ್ತರು,
ಭಾ.ಸ್ಕೌ.ಗೈ . ಜಿಲ್ಲಾ ಸಂಸ್ಥೆ
ದಾವಣಗೆರೆ

ಮಕ್ಕಳಿಗೆಂದು ಪಠ್ಯೇತರ ಚಟುವಟಿಕೆಗಳು ಇಲ್ಲದ ಆ ಕಾಲದಲ್ಲಿ ಅಂದಿನ ಮಕ್ಕಳಿಗೆಂದು ಸ್ಕೌಟ್ ಮತ್ತು ಗೈಡ್ ಚಳುವಳಿಯು 1928ರಲ್ಲಿ ಸ್ಥಳೀಯ ಸಂಸ್ಥೆಯಾಗಿ ಪ್ರಾರಂಭವಾಯಿತು. ದಾವಣಗೆರೆಯ ಜನತೆಗೆ ಸ್ಕೌಟಿನ ಜಾತ್ಯತೀತ ಸಾಮಾಜಿಕ ಮೌಲ್ಯಗಳನ್ನು ಮನವರಿಕೆ ಮಾಡಿಕೊಟ್ಟಿತು. ಒಮ್ಮೆ ಮೈಸೂರಿನ ಮಹಾರಾಜರಾಗಿದ್ದ ಕೃಷ್ಣರಾಜ ಒಡೆಯರ್‌ರವರು ದಾವಣಗೆರೆಗೆ ಆಗಮಿಸಿದ್ದಾಗ ಶಿಸ್ತು ಪಾಲನೆ ನಿರ್ವಹಿಸಿದ ಹೆಮ್ಮೆ ಸ್ಕೌಟ್ ಮಕ್ಕಳದಾಗಿತ್ತು.

ಮೊಟ್ಟ ಮೊದಲು ದಾವಣಗೆರೆ ಡಿ.ಇ.ಎ. ಮಾಧ್ಯಮಿಕ ಶಾಲೆಯಲ್ಲಿ ಒಂದು ಸ್ಕೌಟ್ ಟ್ರೂಪ್ ಪ್ರಾರಂಭವಾಯಿತು. ಶ್ರೀಯುತ ಎ.ಆರ್. ಶಂಕರಯ್ಯನವರು ಸ್ಕೌಟ್ ಮಾಸ್ಟರ್ ಶಿಕ್ಷಣ ಪಡೆದು ಕಾರ್ಯನಿರ್ವಹಿಸುತ್ತಿದ್ದರು. ಈ ಹಿಂದೆ ಇದ್ದ ಲೋಕಲ್ ಅಸೋಸಿಯೇಷನ್ ಡಿ.ಇ.ಎ. ಶಾಲೆಯ ಮುಖ್ಯ ಅಧ್ಯಾಪಕರಾಗಿದ್ದ ದಿ|| ಜೆ. ಶೇಷಗಿರಿರಾಯರು ಸ್ಕೌಟ್ಸ್ ಮತ್ತು ಗೈಡ್ಸ್‌ನ್ನು ಪುನರುಜ್ಜೀವನಗೊಳಿಸಲು ಕಾರ್ಯತತ್ಪರರಾದರು. ಹಿಂದಿನ ಲೋಕಲ್ ಅಸೋಸಿಯೇಷನ್‌ನ ಪದಾಧಿಕಾರಿಗಳಾಗಿದ್ದ ದಿ|| ಧರ್ಮರತ್ನಾಕರ ಮದ್ದೂರಾಯಪ್ಪನವರ ಅಧ್ಯಕ್ಷತೆಯಲ್ಲಿ ಸ್ಥಳೀಯ ಸಂಸ್ಥೆ ರೂಪುಗೊಂಡಿತು. ದಿ|| ಜೆ. ಶೇಷಗಿರಿರಾಯರು ಕಾರ್ಯದರ್ಶಿಗಳಾಗಿದ್ದರು. 1940ರ ಸುಮಾರಿನಲ್ಲಿ ದಿ|| ಕೃಷ್ಣರಾಯರೆಂಬುವವರು ಹೊರ ದೇಶದಿಂದ ಶಿಕ್ಷಣ ಪಡೆದು ಬಂದು ಸರ್ಕಾರಿ ಪ್ರೌಢಶಾಲೆಯಲ್ಲಿ ಮುಖ್ಯೋಪಾಧ್ಯಾಯ ರಾಗಿದ್ದರು. ಇವರಿಗೆ ಸ್ಕೌಟಿಂಗ್‌ನಲ್ಲಿ ಒಳ್ಳೆಯ ಅಭಿಪ್ರಾಯ ಇದ್ದ ಕಾರಣ ಸರ್ಕಾರಿ ಪ್ರೌಢಶಾಲೆಯಲ್ಲಿ ಸ್ಕೌಟಿಂಗ್ ಪ್ರಾರಂಭಿಸಿದರು. 1940ರಲ್ಲಿ ಅಸಿಸ್ಟೆಂಟ್ ಕಮಿಷನರ್ ಆಗಿ ಬಂದ ದಿ|| ಬಿ. ಭೀಮಪ್ಪನವರ ಪ್ರೋತ್ಸಾಹದಿಂದ ಸ್ಥಳೀಯ ಸಮಿತಿಯನ್ನು ನಿಯಮಿಸಿ ಬೈಲಾಗಳನ್ನು ತಯಾರಿಸಿ ಚಿತ್ರದುರ್ಗದ ಜಿಲ್ಲಾ ಸಮಿತಿಯ ಆಶ್ರಯದಲ್ಲಿ ಕೆಲಸ ಮಾಡಲು ಆರಂಭಿಸಿತು. ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾಗಿದ್ದ ದಿ|| ಜೆ. ಶೇಷಗಿರಿರಾಯರು 1942ರಲ್ಲಿ ದಾವಣಗೆರೆಯಲ್ಲಿ 6 ಟ್ರೂಪ್‌ಗಳನ್ನು ಪ್ರಾರಂಭಿಸಿದರು. ಸಿಟಿ ರ್‍ಯಾಲಿಯೊಂದು ನಡೆಯಿತು. ಆಗಿನ ಡಿ.ಡಿ.ಪಿ.ಐ. ಆಗಿದ್ದ ದಿ|| ಕಸ್ತೂರಿರಾಜ ಶೆಟ್ಟರು ರ್‍ಯಾಲಿಯ ಪ್ರಾರಂಭೋತ್ಸವ ಮಾಡಿದರು. 1945ರಲ್ಲಿ ಚಿತ್ರದುರ್ಗ ಜಿಲ್ಲಾ ರ್‍ಯಾಲಿಯು ದಾವಣಗೆರೆಯ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ಬಾತಿಯಲ್ಲಿ ಬಹಳ ಚೆನ್ನಾಗಿ ನಡೆಯಿತು. ಎರಡು ದಿನಗಳ ರ್‍ಯಾಲಿಯಲ್ಲಿ 450 ಮಕ್ಕಳು ಭಾಗವಹಿಸಿದ್ದರು. ಆಗ ಧರ್ಮರತ್ನಾಕರ ಮದ್ದೂರಾಯಪ್ಪನವರು ರ್‍ಯಾಲಿಯ ಸಮಾರಂಭದಲ್ಲಿ ಭಾಗವಹಿಸಿ ಬಹುಮಾನಗಳನ್ನು ಸ್ವಂತ ಖರ್ಚಿನಲ್ಲಿ ಕೊಟ್ಟರು.

ಒಂದೆರಡು ವರ್ಷಗಳ ನಂತರ ಊರಿನಲ್ಲಿ ಒಂದು ಸಿಟಿ ರ್‍ಯಾಲಿ ನಡೆಯಿತು. ಆ ರ್‍ಯಾಲಿಯಲ್ಲಿ ಭಾಗವಹಿಸಿ ಆಯಾ ಟ್ರೂಪ್‌ನವರು ತಾವೇ ಅಡಿಗೆ ಮಾಡಿಕೊಂಡು ಒಟ್ಟಿಗೆ ಊಟ ಮಾಡಿ ಉತ್ಸಾಹದಿಂದ ನಡೆಸಿದ ನಾನಾ ಕಾರ್ಯಕ್ರಮಗಳನ್ನು ನೋಡಿ ಪ್ರಭಾವಿತರಾಗಿ ದಿವಂಗತ ಧರ್ಮರತ್ನಾಕರ ಮದ್ದೂರಾಯಪ್ಪನವರು, ಅಸಿಸ್ಟೆಂಟ್ ಕಮೀಷನರ್ ದಿ|| ಬಿ. ಭೀರಪ್ಪನವರೊಂದಿಗೆ ಸಮಾಲೋಚನೆ ಮಾಡಿ ನಗರಸಭೆಯಿಂದ ಪಡೆದುಕೊಂಡ ಈಗಿನ ಸ್ಕೌಟ್ ಭವನದ ಜಾಗದಲ್ಲಿ ಸ್ಕೌಟ್ ಭವನವನ್ನು ಕಟ್ಟಿಸಿಕೊಟ್ಟರು. ಈ ಭವನದ ಶಂಕುಸ್ಥಾಪನೆಯನ್ನು ಮೈಸೂರು ಪಬ್ಲಿಕ್ ವರ್ಕ್ಸ್ ಮಿನಿಸ್ಟರ್ ಆಗಿದ್ದ ದಿ|| ಎಲ್. ಸಿದ್ದಪ್ಪನವರು 26-11-1945ರಲ್ಲಿ ನೆರವೇರಿಸಿದರು. ಈ ಸಮಯದಲ್ಲಿ ಕೊಂಡಜ್ಜಿ ಬಸಪ್ಪನವರು ಎ.ಡಿ.ಸಿ. (ಸ್ಕೌಟ್) ಆಗಿದ್ದರು. ಹಾಗೆಯೇ ಜಿಲ್ಲಾ ಬೋರ್ಡ್ ಮೆಂಬರ್ ಸಹ ಆಗಿದ್ದರು. ಸ್ಕೌಟ್‌ಗೆಂದೆ ಬಾಲ ಮಂಗಳ ಕೋ-ಆಪರೇಟಿವ್ ಸಂಘವನ್ನು ಜೆ. ಶೇಷಗಿರಿರಾಯರು ಮತ್ತು ಶ್ರೀ ಎ.ಆರ್. ಶಂಕರಯ್ಯನವರು ಡಿ.ಇ.ಎ. ಶಾಲೆಯಲ್ಲಿ ಪ್ರಾರಂಭಮಾಡಿ ಸಾರ್ವಜನಿಕ ಸೇವೆಯಲ್ಲಿ ತೊಡಗಿಸಿದರು. ಸುಮಾರು 6 ವರ್ಷ ಕೆಲಸ ಮಾಡಿದ ಈ ಸಂಘವು ಸ್ಕೌಟ್‌ಗಳಿಗೆ ಬೇಕಾದ ಸಮಾನುಗಳನ್ನು ಮಾರುತ್ತಿತ್ತು.

ಡಿ.ಇ.ಎ. ಶಾಲೆಯ 10ನೇ ವಾರ್ಷಿಕೋತ್ಸವಕ್ಕೆ ಆಗಮಿಸಿದ್ದ ಚೀಫ್ ಸ್ಕೌಟ್ ಕಮೀಷನರ್ ದಿ. ಪಿ. ಶಿವಶಂಕರ್‌ರವರು 24 ಗುಂಪು ಹೊಂದಿ ಲೋಕಲ್ ಅಸೋಸಿಯೇಷನ್ ಆಗಿದ್ದ ದಾವಣಗೆರೆಯನ್ನು, ದಾವಣಗೆರೆ ಸಿಟಿ ಡಿಸ್ಟ್ರಿಕ್ಟ್ ಆಗಿ ಪರಿವರ್ತಿಸಿದರು. ಹರಿಹರ, ಬಾತಿ, ಕೊಡದಗುಡ್ಡದಲ್ಲಿ ಸ್ಕೌಟ್ ಟ್ರೈನಿಂಗ್ ಶಿಬಿರಗಳಾದವು.

1951ರಲ್ಲಿ ಆಸ್ಟ್ರೀಯದಲ್ಲಿ ಪ್ರಪಂಚದ ಮೂರನೇ ಸ್ಕೌಟ್ ಜಾಂಬೂರಿ ನಡೆಯಿತು. ಅಲ್ಲಿಗೆ ಭಾರತದ ಗುಂಪಿಗೆ ದಾವಣಗೆರೆಯಿಂದ ಮೂರು ಜನ ಭಾಗವಹಿಸಿದ್ದರು. ಅವರುಗಳು :- ದಿ. ಕೊಂಡಜ್ಜಿ ಬಸಪ್ಪ, ದಿ. ಜಯಣ್ಣ ಚಿಗಟೇರಿ ಮತ್ತು ದಿ. ಡಾ|| ಜಿ.ವಿ. ಶಂಕರಪ್ಪ ಇವರುಗಳು ಆಸ್ಟ್ರೀಯಕ್ಕೆ ಹೋಗುವ ಮೊದಲು ಡಿ.ಇ.ಎ. ಶಾಲೆಯವರು ಹೊನ್ನೂರಿನಲ್ಲಿ ಏರ್ಪಡಿಸಿದ್ದ ಓವರ್ ನೈಟ್ ಕ್ಯಾಂಪ್‌ನಲ್ಲಿ ಭಾಗವಹಿಸಿ ಪ್ರತ್ಯಕ್ಷ ಅನುಭವ ಪಡೆದರು. ದಿ|| ಡಾ|| ಜಿ.ವಿ. ಶಂಕರಪ್ಪನವರು ಭಾರತದ ಗುಂಪಿಗೆ ವೈದ್ಯರಾಗಿ ಸೇವೆ ಸಲ್ಲಿಸಿದರು. 1950 ರಿಂದ 1960ರವರೆಗೆ ದಾವಣಗೆರೆ ಜಿಲ್ಲಾ ಕಮೀಷನರ್ ಆಗಿ ದಿ: ಕೊಂಡಜ್ಜಿ ಬಸಪ್ಪನವರು ಸೇವೆ ಸಲ್ಲಿಸಿದರು. ನಂತರ ಸ್ಟೇಟ್ ಕಮೀಷನರ್ ಆದರು. 1953ರಲ್ಲಿ ಭಾರತದ ಮೊದಲ ಸ್ಕೌಟ್ ರ್‍ಯಾಲಿಗೆ ದಾವಣಗೆರೆಯಿಂದ ದಿ: ಎನ್. ನರಸಿಂಹಮೂರ್ತಿ ಮತ್ತು ಶ್ರೀ ಎ.ಆರ್. ಶಂಕರಯ್ಯನವರು ಮುಖಂಡರಾಗಿ ಹೋಗಿದ್ದರು. ಅವರು ಬ್ಯಾಂಡ್‌ಸೆಟ್ಟ್‌ನಲ್ಲಿ ಮೊದಲಿಗರು ಮತ್ತು ಶಿಸ್ತಿನಲ್ಲಿ ಮೂರನೆಯವರಾಗಿ ಹೆಸರು ಪಡೆದರು.

ದಾವಣಗೆರೆ ಚಿಗಟೇರಿ ಜನರಲ್ ಆಸ್ಪತ್ರೆಯ ಶಂಕುಸ್ಥಾಪನೆಗೆ ಆಗಮಿಸಿದ್ದ ರಾಜ್ಯಪಾಲ ಜಯಚಾಮರಾಜ ಒಡೆಯರ್ ಅವರನ್ನು ಸ್ಕೌಟ್

ಕಾರ್ಯವನ್ನು ನಿರ್ವಹಿಸುವಾಗ, ಜ್ಞಾನದ ಪರೀಕ್ಷೆಯಾಗುವುದು - ಡಾ|| ರಾಧಾಕೃಷ್ಣನ್.

ಮಕ್ಕಳು ತಾವೇ ನಿರ್ಮಿಸಿದ್ದ ಸ್ವೇವ್ ಗೇಟ್ ಮೂಲಕ ಅದ್ದೂರಿಯಾಗಿ ಸ್ವಾಗತಿಸಿ ಸನ್ಮಾನಿಸಿದ ಕಾರ್ಯಕ್ರಮ ತುಂಬ ಪ್ರಶಂಸೆಗೆ ಒಳಗಾಯಿತು.

ಆಗ ಪ್ರಾರಂಭವಾದ ಸ್ಕೌಟ್ ಮತ್ತು ಗೈಡ್ ಚಳುವಳಿಯನ್ನು ದಿ: ಕೊಂಡಜ್ಜಿ ಬಸಪ್ಪನವರು ಬಹಳ ಅಭಿವೃದ್ಧಿ ಪಡಿಸಿದರು. ದಾವಣಗೆರೆಯಿಂದ 14 ಕಿ.ಮೀ. ದೂರವಿರುವ ಚಿಟ್ಟಗ್ರಾಮ ಕೊಂಡಜ್ಜಿಯ ಹೊರವಲಯದಲ್ಲಿ ಇರುವ ಪ್ರಕೃತಿ ದತ್ತವಾದ ಬೆಟ್ಟ, ಕಾಡು, ವಿಶಾಲವಾದ ಕೆರೆಯನ್ನು ಹೊಂದಿರುವ ಪ್ರದೇಶವನ್ನು ರಾಜ್ಯ ತರಬೇತಿ ಕೇಂದ್ರವನ್ನಾಗಿ 1969ರಲ್ಲಿ ಪ್ರಾರಂಭ ಮಾಡಿದರು.

ದಾವಣಗೆರೆಯಲ್ಲಿ ಅನೇಕ ಶಾಲೆಗಳಲ್ಲಿ ಸ್ಕೌಟ್ ಮತ್ತು ಗೈಡ್ ಘಟಕಗಳು ಪ್ರಾರಂಭವಾದವು. 1960 ರಿಂದ ದಿ: ಜಯಣ್ಣ ಚಿಗಟೇರಿ, ದಿ: ಎಂ.ಕೆ. ಪಾಣಿ, ಋಭದ ಕಾರ್ನಿಕ್, ಶ್ರೀಮತಿ ನಾಗಮ್ಮ ಕೇಶವಮೂರ್ತಿ ಹೀಗೆ ಅನೇಕರು ಸ್ಕೌಟ್ ಮತ್ತು ಗೈಡ್ ಕಮೀಷನರ್‌ಗಳಾಗಿ ಸೇವೆ ಸಲ್ಲಿಸಿದರು. ಈ ಅವಧಿಯಲ್ಲಿ ಶ್ರೀ : ಜಯಪ್ರಕಾಶ್ ಚಿಗಟೇರಿ ಮತ್ತು ಶ್ರೀ : ಜಯವಿಭವ ಚಿಗಟೇರಿ ಇವರು ದಾವಣಗೆರೆಯಿಂದ 8ನೇ ಆಸ್ಟ್ರೇಲಿಯ ಜಾಂಬೂರಿಗೂ, 1975ರಲ್ಲಿ ಜಪಾನಿನ ಓಸ್ಲೂ ನಗರದಲ್ಲಿ ನಡೆದ 7ನೇ ನಿಪ್ಪಾನ್ ಜಾಂಬೂರಿಗೂ ಮತ್ತು ಶ್ರೀಲಂಕಾದಲ್ಲಿ ನಡೆದ ರೋವರ್ ಮೂಟ್‌ಗೂ ಶ್ರೀ : ಪ್ರಭುದೇವ ಚಿಗಟೇರಿಯವರು ಭಾಗವಹಿಸಿದ್ದರು ಮತ್ತು ನಾರ್ವೆಯಲ್ಲಿ ನಡೆದ 14ನೇ ವರ್ಲ್ಡ್ ಜಾಂಬೂರಿಗೆ ಶ್ರೀ : ಮುರುಘರಾಜೇಂದ್ರ ಚಿಗಟೇರಿ, 2000ನೇ ಇಸವಿಯಲ್ಲಿ ಲಂಡನ್‌ನಲ್ಲಿ ನಡೆದ ಜಾಂಬೂರಿಗೆ ಕು: ವಂದನಾ ಶಾನ್‌ಭಾಗ್ ಭಾಗವಹಿಸಿ ಜಿಲ್ಲಾ ಸಂಸ್ಥೆಗೆ ಹೆಸರು ತಂದುಕೊಟ್ಟರು.

ಸ್ಕೌಟ್ ಭವನದ ಮುಂದೆ ಖಾಲಿ ಇದ್ದ ಜಾಗದಲ್ಲಿ ಕಟ್ಟಬೇಕೆಂದಿದ್ದ ಮತ್ತು ಬಹಳ ದಿನಗಳಿಂದ ನೆನೆಗುದಿಗೆ ಬಿದ್ದಿದ್ದ ವಾಣಿಜ್ಯ ಸಂಕೀರ್ಣವು ಜಿಲ್ಲಾ ಅಧ್ಯಕ್ಷರಾದ ಶ್ರೀ : ಅಥಣಿ ಕೊಟ್ರೇಶ್ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಜೆಂಬಗಿ ಶರಣಪ್ಪನವರು ಜಿಲ್ಲಾ ಸ್ಕೌಟ್ ಆಯುಕ್ತರಾದ ಶ್ರೀ : ಮುರುಘರಾಜೇಂದ್ರ, ಚಿಗಟೇರಿ, ಗೈಡ್ ಆಯುಕ್ತರಾದ ದಿ : ಜಿ.ಎಸ್. ವನಜಾಕ್ಷಮ್ಮನವರ ಸತತ ಶ್ರದ್ಧೆ ಪ್ರಯತ್ನದಿಂದ ನಿರ್ಮಾಣವಾಗಿದೆ.

ದಾವಣಗೆರೆಯ ಹೃದಯ ಭಾಗದಲ್ಲಿ ಇರುವ ಈ ವಾಣಿಜ್ಯ ಸಂಕಿರಣವು ಎಲ್ಲರ ಗಮನ ಸೆಳೆಯುತ್ತದೆ. ಈ ಸಂಕಿರಣವನ್ನು ಅಂದಿನ ಕ್ರೀಡಾ ಮತ್ತು ಯುವಜನ ಮಂತ್ರಿಗಳಾಗಿದ್ದ ಶ್ರೀ : ಎಸ್.ಎಸ್. ಮಲ್ಲಿಕಾರ್ಜುನ್‌ರವರು 22-11-2002ರಲ್ಲಿ ಶಂಕು ಸ್ಥಾಪನೆ ಮಾಡಿದರು.

ಈ ಭವನವನ್ನು ನಿರ್ಮಿಸುವಾಗ ಉಂಟಾದ ನೀರಿನ ಅಭಾವವನ್ನು ಸ್ಕೌಟ್ ಭವನದ ಆವರಣದಲ್ಲಿ ಇರುವ, ಬರಗಾಲದಿಂದ ಬತ್ತಿ ಹೋಗಿದ್ದ ಕೊಳವೆ ಭಾವಿಯನ್ನು ಮರುಪೂರಣಗೊಳಿಸಿ ನೀರಿನ ಅಭಾವವನ್ನು ನೀಗಿಸಿಕೊಳ್ಳಲಾಯಿತು. ಈಗ ಯಥೇಚ್ಚವಾದ ನೀರಿನ ಸೌಕರ್ಯದಿಂದ ಸುಂದರವಾದ ಹೂ,ಗಿಡ, ಮರ ಮತ್ತು ಹುಲ್ಲಿನ ಹಾಸಿನಿಂದ ಕಂಗೊಳಿಸುವ ಉದ್ಯಾನವನವು ಭವನದ ಆವರಣದ ಒಳಗೆ ಬರುತ್ತಿದ್ದಂತೆಯೇ ಥಟ್! ಎಂದು ಎದುರಾಗಿ ಎಲ್ಲರ ಕಣ್ಮನ ತಣಿಸುವಂತೆ ನಿರ್ಮಾಣವಾಗಿದೆ.

ಬರಗಾಲ ಮತ್ತು ರಾಜಕೀಯ ಸನ್ನಿವೇಶಗಳಿಂದ ಮುಂದೂಡಲಾಗಿದ್ದ ರಜತ ರಾಜ್ಯ ಸ್ಕೌಟ್ ಮತ್ತು ಗೈಡ್ ಜಾಂಬುರೇಟ್‌ನ್ನು ಈ ವರ್ಷ 2-1-06 ರಿಂದ 8-1-06ರವರೆಗೆ ಅದ್ದೂರಿಯಾಗಿ ನಡೆಸಲು ಸರ್ವಸಿದ್ಧತೆಗಳು ನಡೆಯುತ್ತಿವೆ. ಜಿಲ್ಲಾ ಸಂಸ್ಥೆ ಮತ್ತು ತಾಲ್ಲೂಕು ಸಂಸ್ಥೆಯ ಪದಾಧಿಕಾರಿಗಳು ಉತ್ಸಾಹದಿಂದ ಕೆಲಸ ಮಾಡುತ್ತಿದ್ದಾರೆ. ದಾವಣಗೆರೆಯ ಜಿಲ್ಲಾಧಿಕಾರಿಗಳಾಗಿರುವ ಶ್ರೀ ಎಂ.ಬಿ. ದ್ಯಾಬೇರಿ, ಶ್ರೀ ನಂಜುಂಡೇಶ್ವರ ಕೇಂದ್ರ ಸ್ಥಾನಿಕ ಆಯುಕ್ತರು ಜಿಲ್ಲಾಧಿಕಾರಿಗಳ ಕಛೇರಿ, ಡಾ : ಸಿ.ಜಿ. ಬೆಟ್‌ಸೂರ್‌ಮಠ್ ಅಸಿಸ್ಟೆಂಟ್ ಕಮೀಷನರ್ ಇವರುಗಳ ಹೆಚ್ಚಿನ ಸಹಕಾರದಿಂದ ಸರ್ವ ಸಿದ್ಧತೆಗಳು ನಡೆಯುತ್ತಿವೆ. 1938ರಲ್ಲಿ ಚಿತ್ರದುರ್ಗ ಜಿಲ್ಲೆಯಲ್ಲಿ ನಡೆದಿದ್ದ ರಾಜ್ಯ ಜಾಂಬೂರೇಟ್ ಈಗ ನಮ್ಮ ಊರಾದ ದಾವಣಗೆರೆಯಲ್ಲಿ 68 ವರ್ಷಗಳ ನಂತರ ನಡೆಯುತ್ತಿದೆ. ನಾವೆಲ್ಲರು ನಮ್ಮ ಊರಿನಲ್ಲೇ ನಡೆಯುತ್ತಿರುವ 25ನೇ ರಾಜ್ಯ ಸ್ಕೌಟ್ ಮತ್ತು ಗೈಡ್ ಜಾಂಬೂರೇಟ್ ಅತಿ ಯಶಸ್ವಿಯಾಗಿ ನಡೆಯಲೆಂದು ಹಾರೈಸೋಣ. ●

## ಆತ್ಮ ನಿವೇದನೆ

ಶಿಕ್ಷಣದಲ್ಲಿ ಪರಿವರ್ತನೆಯಾಗದೆ ಜಗತ್ತಿಗೆ ಸುಖವಿಲ್ಲ.

ವಿದ್ಯಾರ್ಥಿಗಳಿಗೆ ಔದ್ಯೋಗಿಕ, ವ್ಯವಹಾರಿಕ, ಆಧ್ಯಾತ್ಮಿಕ ಮೂರು ಶಿಕ್ಷಣಗಳನ್ನು ಕೊಡಬೇಕು.

ಯಾವ ಸಮಾಜದಲ್ಲಿ ಉತ್ತಮ ತಾಯಂದಿರಲ್ಲವೋ ಆ ಸಮಾಜವು ಮುಂದುವರಿಯುವುದು ಸಾಧ್ಯವಿಲ್ಲ.

ಚಂಚಲ ಮನಸ್ಸೇ ಸಮಸ್ತ ವಿಪತ್ತಿಗೂ ಕಾರಣವಾಗಿದೆ.

ಮಗುವಿಗೆ ಆಟದ ಸಾಮಾನುಗಳು ಸಿಕ್ಕರೆ ತಾಯಿಯನ್ನು ಮರೆಯುವುದು ಸ್ವಭಾವ, ಜೀವಾತ್ಮನಿಗೆ ವಿಷಯಗಳು ಸಿಕ್ಕರೆ ಪರಮಾತ್ಮನನ್ನು ಮರೆಯುವುದು ಸ್ವಭಾವ.

ಸಿಬ್ಬಿನಿಂದ ಕೊಯ್ದ ಮೂಗು ಅಂಟಿಸಲು ಬರುವುದಿಲ್ಲ. ಕೋಪಿಗೆ ಸುಖವೇ ಇಲ್ಲ .ಶಾಂತಿಯುಳ್ಳವಗೆ ದುಃಖವೇ ಇಲ್ಲ .

ದುಡುಕಿನಿಂದ ಬಹಳ ಹಾನಿಯಿದೆ. ಹೇಳಿಕೆಯ ಮಾತು ಅನರ್ಥಕ್ಕೆ ಕಾರಣವಾದುದು.

ಕ್ಷಮಾ ಗುಣವೇ ಜ್ಞಾನಿಯ ಒಡವೆ.

ಒಂದು ಗೂಡಿಸುವ ಸಾಮರ್ಥ್ಯವೇ ಪ್ರೇಮ.

ನಮ್ಮ ಭಾಷೆ ಎನ್ನುವುದು ನಮ್ಮದೇ ಪ್ರತಿಬಿಂಬ.

ದೃಷ್ಟಿಯಂತೆ ಸೃಷ್ಟಿ.

ಪರರನ್ನು ಅರಿತವನು ಜಾಣ, ತನ್ನನ್ನು ಅರಿತವನು ಜ್ಞಾನಿ - ಲಾವೋತ್ಸೆ.



# ಭಾರತ್ ಸ್ಕೌಟ್ಸ್ - ಗೈಡ್ಸ್ ಋಣ ಸಂದಾಯಕ್ಕೆ ಪೂರಕ


ಶ್ರೀ ಹೊರಪೇಟಿ ಮಲ್ಲೇಶಪ್ಪ
ಕ್ಷೇತ್ರ ಶಿಕ್ಷಣಾಧಿಕಾರಿಗಳು,
ಹರಿಹರ ತಾಲ್ಲೂಕು, ಹರಿಹರ.


ಋಣವ ತೀರಿಸಬೇಕು, ಋಣವ ತೀರಿಸಬೇಕು।
ಋಣವ ತೀರಿಸುತ ಜಗದಾದಿಸತ್ವವನು ॥
ಜನದಿ ಕಾಣುತ್ತದರೊಳ್ ಒಂದುಗೂಡಲು ಬೇಕು।
ಮನೆಯೊಳಗೆ ಮಠ ನಿನಗೆ - ಮಂಕುತಿಮ್ಮ ॥

ಎಂಬ ಡಿ.ವಿ.ಜಿ.ಯವರ ಕಗ್ಗದಲ್ಲಿರುವಂತೆ, ಈ ಭೂಮಿಯ ಮೇಲೆ ಹುಟ್ಟಿಬಂದ ಪ್ರತಿಯೊಬ್ಬ ಮನುಷ್ಯನು ಋಣಗಳನ್ನು ತೀರಿಸಲೇಬೇಕು. ಋಣಗಳನ್ನು ತೀರಿಸುತ್ತಾ,ವೈಶಾಲ್ಯತೆಯೆಡೆಗೆ ಸಾಗುತ್ತಾ,ಜಗದ ಹೃದಯವನ್ನು ಜನರಲ್ಲಿ ಕಾಣಬೇಕು. ಎಲ್ಲರೊಡನೆಯೂ ಒಟ್ಟುಗೂಡಿ ಬಾಳಿದಾಗ ಮನೆಯೇ ಮಠವಾಗುತ್ತದೆ ಎಂಬುದು ಇದರ ತಾತ್ಪರ್ಯವಾಗಿದೆ.

ಜಗತ್ತಿನ ಮೇಲಿನ ಪ್ರತಿಯೊಂದು ಹುಟ್ಟಿಗೂ ಒಂದು ಅರ್ಥವಿದೆ. ಆ ಅರ್ಥವನ್ನು ತಿಳಿದು ಸತ್ವಯುತವಾಗಿ ಬೆಳೆಯಲು ಪ್ರಯತ್ನಿಸುವುದೇ ಜೀವನದ ಪರಮ ಗುರಿಯಾಗಬೇಕು. ಹುಟ್ಟು ಆಕಸ್ಮಿಕ, ಸಾವು ಅನಿವಾರ್ಯ. ಈ ಆಕಸ್ಮಿಕ ಮತ್ತು ಅನಿವಾರ್ಯಗಳೆರಡರ ಮಧ್ಯೆ ಸ್ವಾರ್ಥ ಸಂಕುಚಿತ ಗರ್ಭದಿಂದ ವಿಶಾಲ ಪ್ರಪಂಚಕ್ಕೆ ಉರುಳುತ್ತಿದ್ದಂತೆಯೇ ಅರಳುತ್ತಾ ಸಾಗಬೇಕು.

''ಹುಟ್ಟಿಸಿದ ದೇವನವ ಹುಲ್ಲ ತಿನಿಸುವನೆ? ಬಗ್ಗಡದ ಕರಕುಂಟು ಮೊಸರ ನೇಹ'' ಎನ್ನುವ ಹಾಗೆ ರಾಷ್ಟ್ರದಲ್ಲಿ ಹುಟ್ಟಿದ ಪ್ರತಿಯೊಬ್ಬರು ಕಾಯಕ ಮಾಡಿ, ತುತ್ತಿನ ಚೀಲ ತುಂಬಿಸಿಕೊಳ್ಳಬೇಕು. ತನ್ನ ಹೊಟ್ಟೆ ತುಂಬಿಸಿಕೊಳ್ಳುವುದಷ್ಟೇ ಆದರೆ ಸ್ವಾರ್ಥವಾಗುತ್ತದೆ. ಅಸಹಾಯಕರು, ಜನ್ಮಕೊಟ್ಟ ತಾಯಿ, ಜನ್ಮಭೂಮಿಗೆ ಕಿಂಚಿತ್ತಾದರೂ ಸೇವೆ ಸಲ್ಲಿಸ ಬೇಡವೆ? ಇದು ಪ್ರತಿಯೊಬ್ಬವ್ಯಕ್ತಿಯ ಮೈಮನಗಳಾಳದಲ್ಲಿ ಒಡಮೂಡಬೇಕು. ಅದನ್ನು ಕಾರ್ಯರೂಪಕ್ಕಿಳಿಸಲು ತತ್ಪರರಾಗಬೇಕು. ಇಂತಹ ಕಾರ್ಯತತ್ಪರತೆ, ವೈಶಾಲ್ಯತೆ, ಕ್ರಿಯಾಶೀಲತೆ, ಸಂಘಟನೆ, ಸ್ವಸಹಾಯ, ಸಹಬಾಳ್ವೆ, ಸಚ್ಚಾರಿತ್ರ್ಯ ಇತ್ಯಾದಿ ಗುಣಗಳು ತಾನೇ ತಾನಾಗಿ ಮೈದುಂಬಿಕೊಳ್ಳಬೇಕು. ಈ ರೀತಿಯ ಗುಣಗಳು ಆವರಿಸಿಕೊಳ್ಳಲು ಸಂಸ್ಕಾರ ಬೇಕು. ಇಂತಹ ಸಂಸ್ಕಾರವನ್ನು ಆರಂಭದಿಂದ ಕಲಿಸಿಕೊಡುವ ಸಂಘಟನೆಯೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್.

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಈ ಪ್ರಪಂಚಕ್ಕೆ ಒಂದು ವರದಾನವಾಗಿದೆ. ಇದು ಬೆಳೆಯುವ ಪೈರುಗಳನ್ನು ಅರಳಿಸುವ ಸತ್ವಯುತ ಭೂಮಿಯಾಗಿದೆ. ಹಾಗಾಗಿಯೇ ಇಂಗ್ಲೆಂಡಿನ ಬೌನ್ಸಿ ದ್ವೀಪದಲ್ಲಿ ಹುಟ್ಟಿದ ಸಂಸ್ಥೆಯೊಂದು ಜಗತ್ತಿನ ಜನಮಾನಸದಲ್ಲಿ ಸಾಮರಸ್ಯದ ಬೇರುಗಳನ್ನು ಹರಡಿ 216 ಕ್ಕಿಂತ ಹೆಚ್ಚಿನ ದೇಶಗಳಲ್ಲಿ ನೆಲೆಯೂರುತ್ತದೆಂದರೆ, ಆ ಸಂಸ್ಥೆಯ ಸಂಸ್ಥಾರೂಪ ಎಂಥದ್ದಿರಬೇಕು? ಹಾಗಾಗಿ ಜಿಲ್ಲೆಯ ಪ್ರತಿಯೊಂದು ಶಾಲೆಯಲ್ಲಿಯೂ ಸ್ಕೌಟ್ಸ್ ಮತ್ತು ಗೈಡ್ಸ್ ಶಾಖೆಗಳು ಪ್ರಾರಂಭವಾಗಬೇಕು. ವಿದ್ಯಾರ್ಥಿಗಳ ಮನೋಭಾವನೆ ವಿಶಾಲವಾಗಬೇಕು. ಅವರು ರಾಷ್ಟ್ರಭಕ್ತಿಯಿಂದ ರಾಷ್ಟ್ರಕ್ಕಾಗಿ ದುಡಿಯುವಂತಾಗಬೇಕು. ಪ್ರಸ್ತುತ ಕಲುಷಿತ ವಾತಾವರಣದಿಂದ ಅವರನ್ನು ಪವಿತ್ರ ಸೇವೆಯ ಕಡೆಗೆ ಕರೆದೊಯ್ಯಬೇಕು. ಇದರ ಸಂಪೂರ್ಣ ಜವಾಬ್ದಾರಿ ನಮ್ಮ ಇಲಾಖೆ ಮತ್ತು ನಮ್ಮ ಶಿಕ್ಷಕರ ಹೆಗಲ ಮೇಲಿದೆ. ಶಿಕ್ಷಕರು ರಾಷ್ಟ್ರದ ಶಿಲ್ಪಿಗಳು ಅವರಿಂದ ಮಾತ್ರ ಇಂತಹ ಕಟ್ಟುವಿಕೆಯ ಸಾಧ್ಯತೆ ಇದೆ. ನಮ್ಮ ಜಿಲ್ಲೆ ಹಾಗೂ ನಮ್ಮ ತಾಲ್ಲೂಕಿನಲ್ಲಿ ಇಂತಹ ಕಟ್ಟುವಿಕೆಯ ಪ್ರಕ್ರಿಯೆಯಲ್ಲಿ ತೊಡಗಿದ ಶಿಕ್ಷಕರು ಸಾವಿರ ಸಾವಿರ ಸಂಖ್ಯೆಯಲ್ಲಿದ್ದಾರೆ. ಅವರ ಅರ್ಪಣಾ ಮನೋಭಾವಕ್ಕೆ ಅಧಿಕಾರಿಗಳು ಸ್ಫೂರ್ತಿಯ ಸೆಲೆಯಾಗಿ ನಿಂತಿದ್ದಾರೆ. ಶಿಕ್ಷಣ ಇಲಾಖೆಯ ಉಪನಿರ್ದೇಶಕದ್ವಯರಾದ ಶ್ರೀಯುತ ಕೆಂಪರಾಜೇಗೌಡರು, ಶ್ರೀಯುತ ನಾಗೇಂದ್ರಪ್ಪನವರು, ದಾವಣಗೆರೆ ಉಪವಿಭಾಗಾಧಿಕಾರಿಗಳಾದ ಡಾ॥ಸಿ.ಜಿ.ಬೆಟಸೂರ್‌ಮಠ್, ಜಿಲ್ಲಾ ಪಂಚಾಯಿತಿಯ ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳಾದ ಶ್ರೀ ಜಿತೇಂದ್ರ ನಾಯಕ್‌ರವರು, ಸನ್ಮಾನ್ಯ ಜಿಲ್ಲಾಧಿಕಾರಿಗಳಾದ ಎಂ.ಬಿ.ದ್ಯಾಬೇರಿಯವರು ಈ ಎಲ್ಲರ ಪೂರಕ ಮಾರ್ಗದರ್ಶನದ ಜೊತೆಗೆ ನಮ್ಮ ಜಿಲ್ಲೆಯ ಎಲ್ಲ ಜನಪ್ರತಿನಿಧಿಗಳೂ ಸಹ ಮಾನವೀಯತೆಯ ಕಳಶವಾಗಿದ್ದಾರೆ. ಹಾಗಾಗಿಯೇ ಎಂಟು ವರ್ಷಗಳ ಬಾಲ್ಯಾವಸ್ಥೆಯಲ್ಲಿಯೇ ನಮ್ಮ ಜಿಲ್ಲೆ, ರಾಜ್ಯದ ಭೂಪಟದಲ್ಲಿ ಅದ್ವಿತೀಯ ಸ್ಥಾನಗಳಿಸಲು ಸಾಧ್ಯವಾಗಿದೆ.

''ಕಠಿಣ ಪರಿಶ್ರಮ ಪ್ರಾಮಾಣಿಕತೆ, ದೃಢಸಂಕಲ್ಪ ಗಳು ಯಶಸ್ಸಿನ ಮೂಲಗಳು'' ''ಒಗ್ಗಟ್ಟಿನ ಮೂಲಕ ಸಾಧಿಸಿದ ಬಲದಲ್ಲಿ ತೃಪ್ತಿಯೂ ಇರುತ್ತದೆ.'' ಎನ್ನುವ ಚರ್ಚಿಲ್ಲರ ಮಾತನ್ನು ನಾವೆಲ್ಲರೂ ಸೇರಿ ಸಾಕಾರಗೊಳಿಸೋಣ. ●

ಸುಲಿದ ಬಾಳೆಯ ಹಣ್ಣಿನಂದದಿ
ಕಳಿದ ಸಿಗುರಿನ ಕಬ್ಬಿನಂದದಿ
ಅಳಿದ ಉಷ್ಣದ ಹಾಲಿನಂದದಿ ಸುಲಭವಾಗಿರ್ಪ
ಲಲಿತವಹ ಕನ್ನಡದ ನುಡಿಯಲಿ
ತಿಳಿದು ತನ್ನೊಳು ತನ್ನ ಮೋಕ್ಷವ
ಗಳಿಸಿಕೊಂಡರೆ ಸಾಲದೇ ಸಂಸ್ಕೃತದೊಳಿನ್ನೇನು ?

- ಮಹಲಿಂಗರಂಗ

- - - - -

ಎದ್ದದ್ದು ಬೀಳುತಿಹೆ, ಗುದ್ದಾಡಿ ಸೋಲುತಿಹೆ ।
ಗದ್ದಲವ ತುಂಬಿ ಪ್ರಸಿದ್ಧನಾಗುತಿಹೆ ॥
ಉದ್ಧರಿಸುವೆನು ಜಗವನೆನ್ನುತಿಹ ಸಖನೆ, ನಿ-।
ನ್ನುದ್ಧಾರವೆಷ್ಟಾಯ್ತೋ ? - ಮಂಕುತಿಮ್ಮ ॥

- ಡಿ.ವಿ.ಜಿ.

ಶಿಕ್ಷಕರು ಜ್ಞಾನದೇಗುಲದ ಬಾಗಿಲು ತೆರೆಯುತ್ತಾರೆ, ಆದರೆ ನಿಜವಾಗಿಯೂ ಅದರೊಳಗೆ ಪ್ರವೇಶಿಸಬೇಕು - ಚೀನೀ ಗಾದೆ.



# ಸ್ಕೌಟ್ಸ್ ಗೈಡ್ ಶಿಬಿರದ ಜೀವನ

ಪಿ. ಬಸಮ್ಮ ಎ.ಎಲ್.ಟಿ(ಬಿ)
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ದಾವಣಗೆರೆ.

ಶಿಬಿರ ಎಂದ ತಕ್ಷಣ ನೆನಪಾಗುವುದು ಬೇಸಿಗೆ ಶಿಬಿರ, ಆರೋಗ್ಯ ಶಿಬಿರ, ಸಾಂಸ್ಕೃತಿಕ ಶಿಬಿರ, ಸಂಗೀತ ಶಿಬಿರ, ಆಧ್ಯಾತ್ಮಿಕ ಶಿಬಿರ, ಕ್ರೀಡಾ ಚಟುವಟಿಕೆಗಳ ಶಿಬಿರ, ರಾಷ್ಟ್ರೀಯ ಯುವ ಸಪ್ತಾಹ ಶಿಬಿರ, ಎನ್.ಸಿ.ಸಿ. ಶಿಬಿರ, ಸೇವಾದಳ ಶಿಬಿರ, ರಾಷ್ಟ್ರೀಯ ಸೇವಾ ಯೋಜನಾ ಶಿಬಿರ, ಇನ್ನೂ ಅನೇಕ ಶಿಬಿರಗಳು. ಯಾವ ಉದ್ದೇಶದಿಂದ ಶಿಬಿರವನ್ನು ಏರ್ಪಡಿಸುತ್ತಾರೋ ಆ ವಿಷಯಗಳ ಬಗ್ಗೆ ಮಾತ್ರ ಉಪನ್ಯಾಸ, ಚರ್ಚೆ, ಊಟ, ವಸತಿಗೆ ಮೀಸಲಾಗಿರುತ್ತದೆ. ಆದರೆ ಇವುಗಳೆಲ್ಲವನ್ನು ಮೀರಿ ವ್ಯವಸ್ಥಿತವಾಗಿ ಯೋಜದನಾಬದ್ಧವಾಗಿ ನಡೆಯುವ ಶಿಬಿರ 'ಸ್ಕೌಟ್ ಗೈಡ್' ಶಿಬಿರ ಮಾತ್ರ.

ಸ್ಕೌಟ್ ಗೈಡ್ ಶಿಬಿರ ಜೀವನವೆಂದರೆ ಒಂದು ವಿಶಿಷ್ಟವಾದ ಮನೋಲ್ಲಾಸ ನೀಡುವ ಕಾಡಿನ ವಸತಿ ಶಿಬಿರ. ಇಂದು ಮನುಷ್ಯನ ಕಾಂಕ್ರೀಟ್ ಪ್ರಪಂಚದಲ್ಲಿ ವಾಹನಗಳಿಂದ ಬರುವ ದಟ್ಟ ಹೊಗೆಯನ್ನು ಸೇವಿಸಿ ಜಿಡ್ಡುಗಟ್ಟಿ ಹೋಗಿರುತ್ತಾನೆ, ಆದರೆ ಪ್ರಕೃತಿಯ ಮಡಿಲಲ್ಲಿ ಉತ್ತಮವಾದ ವಾಯುಸೇವನೆಯನ್ನು ಪಡೆದು ಕೆಲವೇ ದಿಗಳಾದರೂ ದೇಹ ಮತ್ತು ಮನಸ್ಸನ್ನು ಚೇತನಗೊಳಿಸಿಕೊಳ್ಳುವ ಏಕೈಕ ಶಿಬಿರ ಸ್ಕೌಟ್ ಗೈಡ್ ಶಿಬಿರ ಮಾತ್ರ.

ಈ ಶಿಬಿರದಲ್ಲಿ ಯಾವುದೇ ಚಟುವಟಿಕೆ ನಡೆದರೂ ಯೋಜನಾ ಬದ್ಧವಾಗಿ ಶಿಸ್ತಿನಿಂದ ಸಮಯ ಪಾಲನೆ, ಮಿತವ್ಯಯವಾಗಿ ನಡೆಯುತ್ತದೆ. ಈ ಶಿಬಿರದಲ್ಲಿ ಭಾಗವಹಿಸಲು ಮಕ್ಕಳಿಂದ ಹಿಡಿದು ವಯೋವೃದ್ಧರವರಿಗೆ ಅವಕಾಶಗಳುಂಟು. ಶಿಬಿರದಲ್ಲಿರುವ ಪ್ರತಿಯೊಂದು ಗಿಡಮರಗಳು ಶಿಬಿರ ವಾಸಿಗಳ ಗೆಳೆಯರು. ಇಲ್ಲಿನ ಬಿಡಾರವೇ ಶಿಬಿರಾರ್ಥಿಗಳ ಅರಮನೆ. ಇಂತಹ ಸುಂದರವಾದ ತಾಣದಲ್ಲಿ ಒಬ್ಬ ವ್ಯಕ್ತಿ ಸಮಾಜದಲ್ಲಿ ಸುಸಂಸ್ಕೃತ, ಚಾರಿತ್ರ್ಯವಂತ, ಕ್ರಿಯಾಶೀಲ ವ್ಯಕ್ತಿಯನ್ನಾಗಿ ರೂಪಿಸುವಂತಹ ತರಬೇತಿ ಈ ಶಿಬಿರದಲ್ಲಿ ದೊರೆಯುತ್ತದೆ. ಸೂರ್ಯೋದಯದಿಂದ ಸೂರ್ಯಾಸ್ತದವರೆಗೂ ಶಿಬಿರಾರ್ಥಿಗಳು ಸಮವಸ್ತ್ರ ಧರಿಸಿ ಶಿಬಿರದ ಚಟುವಟಿಕೆಗಳಲ್ಲಿ ಅತ್ಯುತ್ಸಾಹದಿಂದ ಭಾಗವಹಿಸುತ್ತಾರೆ. ಶಿಬಿರಕ್ಕೆ ಬಂದ ಸಹೋದರ ಸಹೋದರಿಯರ ಬಾಂಧವ್ಯದ ಹಾಲು ಜೇನಿನಂತೆ ಬೆರೆತು ಈ ಬಾಂಧವ್ಯ ಸರಪಳಿಯಂತೆ ಇದ್ದು, ಶಿಬಿರದ ದಿನಗಳು ಮುಗಿಯುತ್ತಾ ಬಂದಾಗ ಈ ಬಾಂಧವ್ಯ ಸರಪಳಿಯ ಕೊಂಡಿ ಬೇರ್ಪಡುವಾಗ ಕಣ್ಣಿನಲ್ಲಿ ಕಂಬನಿಗಳು ಮಿಡಿಯುವುದುಂಟು. ಆದರೆ ಇದು ಅನಿವಾರ್ಯವಾಗಿರುತ್ತದೆ.

ಈ ಶಿಬಿರದಲ್ಲಿ ಜಾತಿ ಬೇಧವಿಲ್ಲದೇ ವಯಸ್ಸಿನ ಮಿತಿ ಇಲ್ಲದೆ ಭಾಗವಹಿಸಬಹುದಾದಂತಹ ಶಿಬಿರ, ಇತರೇ ಶಿಬಿರಗಳಂತೆ ಈ ಶಿಬಿರ ಪಾಠ ಪ್ರವಚನಗಳಿಗೆ ಮೀಸಲಾಗಿರದೇ ವ್ಯಕ್ತಿಯ ವಿಕಸನಕ್ಕೆ ಬೇಕಾಗುವ ''ದೇಹವೇ ದೇಗುಲ'' ಎಂಬ ತತ್ವಕ್ಕೆ ಬದ್ಧವಾಗಿ ವ್ಯಾಯಾಮ ಚಟುವಟಿಕೆ, ಆಟಗಳು, ಶ್ರಮದಾನ, ಮನರಂಜನೆ, ಬೌದ್ಧಿಕ ಉಪನ್ಯಾಸ, ಪ್ರಕೃತಿಯ ರಕ್ಷಣೆ, ಕಾಡಿನ ಪರಿಚಯ, ಪ್ರಾಣಿ ಪಕ್ಷಿ ಸಂಕುಲಗಳ ರಕ್ಷಣೆಯ ಜೊತೆಗೆ ಪರಸ್ಪರ ಸಹಕಾರ ಮನೋಭಾವವನ್ನು ಮೂಡಿಸುತ್ತದೆ. ಸಮಾಜದ ಆಸ್ತಿಪಾಸ್ತಿಗಳನ್ನು ರಕ್ಷಿಸುವುದು, ಪರೋಪಕಾರ ಮಾಡುವುದು, ಸ್ವ ಇಚ್ಛೆಯಿಂದ ತಮ್ಮ ತಮ್ಮ ಕೆಲಸಗಳನ್ನು ಮಾಡಿಕೊಳ್ಳುವುದು. ಈ ಸ್ಕೌಟ್ ಗೈಡ್ ಶಿಬಿರದಿಂದ ಮೂಡುತ್ತದೆ.

ಅನೇಕ ಶಿಬಿರಗಳ ಉದ್ದೇಶಗಳು ಬೇರೆ ಬೇರೆಯೇ ಆಗಿದ್ದರೂ, ಎಲ್ಲದರ ನೀತಿ ಮಾತ್ರ ಒಂದೇ. ನಾವೆಲ್ಲರೂ ಮನುಜರು, ಒಬ್ಬರಿಗೊಬ್ಬರು ಪರಸ್ಪರ ಸಹಕಾರ ಮನೋಭಾವನೆಯಿಂದ ಮಾತೃದೇಶದ ಸೇವೆಗೈಯಲು ಜಾಗೃತರಾಗಿರುವ ಭಾರತೀಯರು ಎಂಬ ಮನೋಭಾವನೆಯನ್ನು ರೂಢಿಸಿ ಕೊಂಡಿರುವವರು. ರಾಷ್ಟ್ರಭಕ್ತಿಯನ್ನು ಎತ್ತಿ ತೋರಿಸುವವರು ಒಂದೊಂದು ಸಂಸ್ಥೆ ತನ್ನದೇ ಆದ ಮೂಲಮಂತ್ರದೊಂದಿಗೆ ಪ್ರಚಾರದಲ್ಲಿ ನಿರತವಾಗಿದೆ, ಆದರೆ ನೈತಿಕ, ಸಾಮಾಜಿಕ, ದೈಹಿಕ, ಸಾಂಸ್ಕೃತಿಕ ಮತ್ತು ಆಧ್ಯಾತ್ಮಿಕ ನೆಲೆಗಟ್ಟಿನ ಬುನಾದಿಯನ್ನು ರೂಪಿಸಿಕೊಂಡು ಯುವಜನತೆಯನ್ನು ಉತ್ತಮ ಸತ್ಪ್ರಜೆಯನ್ನಾಗಿ ರೂಪಿಸ ಹೊರಟಿರುವ ಏಕೈಕ ಸಂಸ್ಥೆ ''ಭಾರತ್ ಸ್ಕೌಟ್ಸ್ ಮತ್ತು ಗೈಡ್ ಸಂಸ್ಥೆ'' ಮಾತ್ರ ಎಂಬುದು ಪ್ರಸ್ತುತ ಸನ್ನಿವೇಶದಲ್ಲಿ ಆಲಂಗಿಸಿ ಅಪ್ಪಿಕೊಳ್ಳಬಹುದಾದ ಏಕೈಕ ಸಂಸ್ಥೆ ಎಂಬುದರಲ್ಲಿ ಎರಡು ಮಾತಿಲ್ಲ.

ನಮಗೆ ಈ ಶಿಬಿರಗಳಿಂದ ಅನೇಕ ರಾಜ್ಯ ಮತ್ತು ಅಂತರಾಷ್ಟ್ರೀಯ ವಿಷಯಗಳ ಪರಿಚಯವಾಗುತ್ತದೆ. ಹಿರಿಯರ ಮಾತಿನಂತೆ ''ದೇಶ ಸುತ್ತು ಕೋಶ ಓದು'' ಎಂಬಂತೆ ದೇಶಕೋಶಗಳ ಅನುಭವ ಶಿಬಿರಾರ್ಥಿಗಳಿಗೆ ಆಗುತ್ತದೆ, ಹಾಗೆಯೇ ಈ ಶಿಬಿರಗಳು ಏನೇ ಬಂದರೂ ಎದೆಗುಂದದೆ ಧೈರ್ಯದಿಂದ ಮುನ್ನುಗ್ಗಲು ಕಲಿಸುತ್ತವೆ.

ಇಂತಹ ಶಿಬಿರದಲ್ಲಿ ವಾಸಮಾಡಿರುವ ಒಬ್ಬ ವ್ಯಕ್ತಿ ಸಮಾಜದಲ್ಲಿ ತನ್ನದೇ ಆದ ಛಾಪು ಮೂಡಿಸುವಲ್ಲಿ ಮಹತ್ತರವಾದ ಪಾತ್ರವಹಿಸಿ ಸಮಾಜಕ್ಕೆ ಕಂಠಕಪ್ರಾಯವಾಗದೆ ಸುಸಂಸ್ಕೃತ ನಾಗರೀಕನಾಗಿ ಕಾರ್ಯ ನಿರ್ವಹಿಸುತ್ತಿರುವುದಾದರೆ ಆ ವ್ಯಕ್ತಿ ಸ್ಕೌಟ್ ಗೈಡ್ ಚಳುವಳಿಯ ಬಳುವಳಿಯಲ್ಲಿ ಬೆಳೆದ ವ್ಯಕ್ತಿಯೇ ಆಗಿರಲು ಸಾಧ್ಯ ಎಂಬುದನ್ನು ಕರಾರುವಕ್ಕಾಗಿ ಹೇಳಬಹುದಾಗಿದೆ.

ಈ ಶಿಬಿರದಲ್ಲಿ ಒತ್ತಾಯ ಪೂರ್ವಕವಾಗಿ ಇದನ್ನು ನೀನು ಮಾಡಲೇ ಬೇಕು, ಕಲಿಯಲೇಬೇಕು. ಇದನ್ನು ಅಳವಡಿಸಿಕೊಳ್ಳಲೇಬೇಕು. ಎಂಬ ''ಆಜ್ಞಾ'' ಪದ್ಧತಿಗಳೇ ಹೆಚ್ಚಾದರೆ, ಸ್ಕೌಟ್ ಗೈಡ್ ಶಿಬಿರದಲ್ಲಿ ಪ್ರೀತಿ, ವಿಶ್ವಾಸ ಸಹೋದರತ್ವದ ತಳಹದಿ ಮೇಲೆ ಒತ್ತಾಯವಿಲ್ಲದೆ ಇದನ್ನು ನೀ ಮಾಡಿದರೆ ಒಳ್ಳೆಯದು, ಇದರಿಂದ ನಿನಗೆ ಮತ್ತು ಸಮಾಜಕ್ಕೆ ಒಳ್ಳೆಯದೆಂದು ಕಲಿಸುತ್ತದೆ. ಎಂತಹ ಕ್ರೌರ್ಯವಂತನನ್ನೂ ಬದಲಾಯಿಸುವಂತಹ ಮಾನವೀಯ ಮೌಲ್ಯವನ್ನು ಕಲಿಸಿಕೊಡುತ್ತದೆ. ಆದ್ದರಿಂದ ಭಾರತ್ ಸ್ಕೌಟ್ ಮತ್ತು ಗೈಡ್ಸ್ ಶಿಬಿರದ ಜೀವನ ವಿದ್ಯಾರ್ಥಿಗಳಿಗೆ ಹಾಗೂ ಯುವ ಜನತೆಗೆ ಅತ್ಯುತ್ತಮವಾದ ಮಾರ್ಗದರ್ಶಿ ಎಂಬುದರಲ್ಲಿ ಸಂದೇಹವೇ ಇಲ್ಲ ಎಂಬುದನ್ನು ಇಂದಿನ ಸಂದರ್ಭದಲ್ಲಿ ಹೇಳಲು ನನಗೆ ಅತೀವ ಆನಂದವಾಗುತ್ತದೆ.

●

ನಿನ್ನ ವಿಷಯದ ಬಗ್ಗೆ ಆಡಿದ ಕೆಡುಕು, ನಿಜವಿದ್ದರೆ ತಿದ್ದಿಕೋ, ಇಲ್ಲದಿದ್ದರೆ ನಕ್ಕುಬಿಡು- ಶೇಕ್ಸ್‌ಪಿಯರ್.



# ಸ್ಕೌಟ್ ಆಂದೋಲನ - ಮಕ್ಕಳಲ್ಲಿ ದೇಶ ಪ್ರೇಮ ಮತ್ತು ರಾಷ್ಟ್ರೀಯ ಭಾವೈಕ್ಯತೆ ಬೆಳೆಸಲು


ಎಸ್. ಶಂಕರ್‌ನಾಯಕ್
ಜಿಲ್ಲಾ ತರಬೇತಿ ಆಯುಕ್ತರು (ಸ್ಕೌಟ್ಸ್)
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ದಾವಣಗೆರೆ.


ನಾನು ನನ್ನ ಆತ್ಮಸಾಕ್ಷಿಯಾಗಿ ನನ್ನ ಕೈಲಾದ ಮಟ್ಟಿಗೆ ದೇವರಿಗೂ ಮತ್ತು ನನ್ನ ದೇಶಕ್ಕೂ ನನ್ನ ಕರ್ತವ್ಯವನ್ನು ಮಾಡುತ್ತೇನೆ. ಇತರರಿಗೆ ಸಹಾಯ ಮಾಡುತ್ತೇನೆ ಮತ್ತು ಸ್ಕೌಟ್ ನಿಯಮದಂತೆ ನಡೆದುಕೊಳ್ಳುತ್ತೇನೆ ಎಂದು ಪ್ರತಿಜ್ಞೆ ಮಾಡುತ್ತೇನೆ.

ಒಬ್ಬ ಬಾಲಕ ಸ್ಕೌಟ್ ಆಗಲೇಬೇಕಾದರೆ ಆತನು ಮೇಲಿನ ಪ್ರತಿಜ್ಞೆಯನ್ನು ಮಾಡಬೇಕಾಗುತ್ತದೆ. ಅಲ್ಲದೆ ಆತನು ತನ್ನ ಪ್ರಗತಿಪರ ಬೆಳವಣಿಗೆಯ ಪ್ರತಿ ಹಂತದಲ್ಲಿಯೂ ಈ ಪ್ರತಿಜ್ಞೆಯನ್ನು ನೆನಪಿಸಿಕೊಂಡು ಊರ್ಜಿತಗೊಳಿಸುತ್ತಿರಬೇಕಾಗುತ್ತದೆ. ಸ್ಕೌಟ್ ಆಂದೋಲನದ ಉದ್ದೇಶಗಳಲ್ಲಿ ಮಕ್ಕಳನ್ನು ಉತ್ತಮ ಪೌರರನ್ನಾಗಿ ಮಾಡುವುದೇ ಪ್ರಮುಖವಾದದ್ದಾಗಿದೆ.

ಪ್ರತಿ ಬಾಲಕನು ದೇಶ ಸೇವೆ ಮಾಡಲು ಬಯಸುವುದಾದರೆ ಒಂದು ಸುಲಭವಾದ ಮಾರ್ಗವಿದೆ. ಅದೇ ಬಾಯ್‌ಸ್ಕೌಟ್ ಆಗುವುದು ಎನ್ನುತ್ತಾರೆ. ಸ್ಕೌಟ್ ಚಳವಳಿಯ ಜನಕ ಬೇಡನ್ ಪೋವೆಲ್.

ಇದಕ್ಕೆದ್ದಂತೆ ಎಲ್ಲರೂ ದೇಶ ಪ್ರೇಮಿಗಳಾಗಲಾರರು ಧೈರ್ಯ ಮತ್ತು ವ್ಯವಹಾರಿಕ, ಬುದ್ದಿ ವಂತಿಕೆ, ಬಂದ ಅಪಾಯವನ್ನು ಎದುರಿಸುವ ಜಾಣ್ಮೆ ಪರಸ್ಪರ ಸಹಕಾರ, ದೇಶಕ್ಕಾಗಿ ಸರ್ವಸ್ವವನ್ನು ತ್ಯಾಗ ಮಾಡುವ ಮನೋಭಾವನೆ, ಕಾರ್ಯ ಸಾಧನೆಗಾಗಿ ತಮ್ಮ ಆಸೆ ಆಕಾಂಕ್ಷೆ ಹಾಗೂ ಸುಖವನ್ನು ತ್ಯಜಿಸುವಿಕೆ ಮುಂತಾದ ಅಪೇಕ್ಷಣೀಯ ಗುಣಗಳನ್ನು ಮಕ್ಕಳು ತಮ್ಮ ವ್ಯಕ್ತಿತ್ವದಲ್ಲಿ ಅಳವಡಿಸಿಕೊಳ್ಳಬೇಕಾದರೆ ಮತ್ತು ಅಂತರ್ಗತ ಮಾಡಿಕೊಳ್ಳಬೇಕಾದರೆ ಕ್ರಮಬದ್ಧ ತಯಾರಿ ತರಬೇತಿ ಮತ್ತು ಶಿಕ್ಷಣದ ಅಗತ್ಯವಿದೆ. ಅದಕ್ಕಾಗಿಯೇ ಬೇಡನ್ ಪೋವೆಲ್‌ರವರು ಬಾಲಕರಿಗೆ ಗೈಡ್ಸ್‌ಗಾಗಿ ವ್ಯವಸ್ಥಿತವಾಗಿ ನೀಡುವ ಪಠ್ಯಕ್ರಮ ಅನೇಕ ಚಟುವಟಿಕೆಗಳಿವೆ. ಅಂತಹ ಸ್ಕೌಟ್ ಶಿಕ್ಷಣ ಪಡೆದ ಬಾಲಕ-ಬಾಲಕಿಯರು ಮುಂದೆ ಯಾವುದೇ ಕ್ಷೇತ್ರದಲ್ಲಿ ಮುನ್ನಡೆಯುವ ಅವರಿಗೆ ತಮ್ಮ ಕ್ಷೇತ್ರದಲ್ಲಿ ಯಶಸ್ಸು ಪಡೆಯಲು ಮತ್ತು ದೇಶ ಸೇವೆ ಮಾಡಲು ಈ ಸ್ಕೌಟ್ಸ್ ಗೈಡ್ಸ್ ತರಬೇತಿ ತುಂಬಾ ಉಪಯುಕ್ತವಾಗುತ್ತದೆ. ಸ್ವಹಿತಕ್ಕಿಂತ ಮುಂದೆ ದೇಶ ಹಿತ ಎಂಬುದು ಪ್ರತಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ಉದ್ದೇಶವಾಗಿರಬೇಕೆಂದು ಸ್ಕೌಟ್ ಶಿಕ್ಷಣದ ಗುರಿಯಾಗಿದೆ.

ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ತಮ್ಮ ಚಟುವಟಿಕೆಗಳನ್ನು ಹಾಗೂ ಹೊರಾಂಗಣ ಜೀವನವನ್ನು ಪ್ರಕೃತಿ ಸಾನಿಧ್ಯದಲ್ಲಿ ಕಳೆಯುವುದರಿಂದ ಸತ್ಯ, ಸ್ವಾತಂತ್ರ ಮತ್ತು ಸ್ವಾವಲಂಭನೆಯನ್ನು ತಮ್ಮ ವ್ಯಕ್ತಿತ್ವದಲ್ಲಿ ಬೆಳೆಸಿಕೊಳ್ಳುತ್ತಾರೆ. ಉದಾತ್ತ ಸ್ವಭಾವದವರು ಉತ್ಸಾಹಭರಿತರು ಆಗಿರುತ್ತಾರೆ. ತಮ್ಮ ಮಿತ್ರರಿಗೆ ನಂಬಿಗಸ್ಥರಾಗಿರುತ್ತಾರೆ. ತಮ್ಮ ದೇಶಕ್ಕೆ ರಾಷ್ಟ್ರ ಧ್ವಜಕ್ಕೆ ನಿಷ್ಠರಾಗಿರುತ್ತಾರೆ ಎಂದು ಕನ್ನಡ ದೇಶದ ಹಿರಿಯ ಲೇಖಕ ''ಹ್ಯಾಮಿ ಮಿಲ್ಬನ್''ರವರ ಅಭಿಪ್ರಾಯವನ್ನು ಬೇಡನ್ ಪೋವೆಲ್‌ರವರು ಸಂಪೂರ್ಣವಾಗಿ ದೃಢಪಡಿಸುತ್ತಾರೆ.

ಸ್ಕೌಟ್ ಬಾಲಕರು ತಮ್ಮ ಪ್ರಗತಿ ಪರ ಶಿಕ್ಷಣದಲ್ಲಿ ಸಮುದಾಯ ಸೇವೆ ಹಾಗೂ ಸಮಾಜ ಸೇವೆಯಲ್ಲಿ ಪಾಲ್ಗೊಳ್ಳುತ್ತಾರೆ. ಸಮಾಜದ ಅವಶ್ಯಕತೆಯನ್ನು ತಮ್ಮದೇ ಆದ ರೀತಿಯಲ್ಲಿ ಒದಗಿಸಲು ಪ್ರಯತ್ನಿಸುತ್ತಾರೆ. ಮಕ್ಕಳ ಪರಿಸರದ, ಬಡವರ, ರೋಗಿಗಳ, ಅಂಗವಿಕಲರ ಮೊದಲಾದ ದುರ್ಬಲರ ಅಭಿವೃದ್ದಿಗಾಗಿ ವಿವಿಧ ರೀತಿಯಲ್ಲಿ ಶ್ರಮಿಸುವ ಕಾರ್ಯಕ್ರಮಗಳು ಸ್ಕೌಟಿಂಗ್‌ನಲ್ಲಿದೆ. ಸ್ಕೌಟ್ಸ್ : ಗೈಡ್ಸ್ ಮಕ್ಕಳು ಅನೇಕ ಸ್ಪರ್ಧೆಗಳಲ್ಲಿ ಭಾಗವಹಿಸಿ ಪಾರಿತೋಷಕಗಳನ್ನು ಪಡೆಯುತ್ತಾರೆ. ಜನತಾ ಸೇವೆಯೇ ಜನಾರ್ಧನ ಸೇವೆ ಎಂಬುದನ್ನು ಗ್ರಹಿಸಿಕೊಳ್ಳುತ್ತಾರೆ.

ರಾಷ್ಟ್ರೀಯ ಭಾವೈಕ್ಯತ ಕಾರ್ಯಕ್ರಮವನ್ನು ಸ್ಕೌಟ್ ಸಂಸ್ಥೆಯ ಆದ್ಯತೆಯ ಮೇಲೆ ಅನುಷ್ಠಾನಗೊಳಿಸುತ್ತಿರುವುದು ಒಂದು ಮುಖ್ಯವಾದ ಕಾಳಜಿಯ ವಿಷಯವಾಗಿದೆ. ಸ್ಕೌಟಿಂಗಿನ ಸರ್ವಧರ್ಮ ಪ್ರಾರ್ಥನೆ ಹೊರಾಂಗಣ ಚಟುವಟಿಕೆ, ಪ್ರವಾಸ, ಶಿಬಿರವಾಸ, ವಿವಿಧ ಪ್ರಾವೀಣ್ಯತಾ ಪದಕಗಳ ಗಳಿಕೆ, ಸ್ಥಳೀಯ, ಜಿಲ್ಲೆ, ರಾಜ್ಯ ಹಾಗೂ ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದ ರ‍್ಯಾಲಿ, ಜಾಂಬೂರಿ ಮತ್ತು ಸಮಾವೇಶಗಳು, ರಾಷ್ಟ್ರೀಯ ಭಾವೈಕ್ಯತೆಯನ್ನುಂಟು ಮಾಡುವ ಹಾಗೂ ಬಲಪಡಿಸುವ ಮುಖ್ಯ ಚಟುವಟಿಕೆಗಳು.

ರಾಷ್ಟ್ರೀಯ ಭಾವೈಕ್ಯತಾ ಶಿಬಿರಗಳು, ದಳ ಮಟ್ಟದಲ್ಲಿ, ಶಾಲಾ ಹಂತದಲ್ಲಿ ಪ್ರಗತಿಪರ ಶಿಕ್ಷಣ ಸಮಾಜ ಸೇವೆ, ದೇಶಭಕ್ತಿ ಗೀತೆಗಳ ಹಾಡುವಿಕೆಯೇ ಮೊದಲಾದ ಕಾರ್ಯಕ್ರಮಗಳನ್ನು ರಾಷ್ಟ್ರೀಯ ಭಾವೈಕ್ಯತೆಯನ್ನು ಘೋಷಿಸಿ ಬೆಳೆಯಿಸುವ ಸ್ಕೌಟ್ ಕಾರ್ಯಕ್ರಮಗಳಾಗಿವೆ. ಈ ರಾಷ್ಟ್ರದ ಅತ್ಯುನ್ನತ ಪದವಿಯ ಸ್ಥಾನವನ್ನು ಅಲಂಕರಿಸಿದ ರಾಷ್ಟ್ರಪತಿ, ಉಪರಾಷ್ಟ್ರಪತಿ, ಪ್ರಧಾನ ಮಂತ್ರಿಗಳಿಂದ ಅನುಕ್ರಮವಾಗಿ ಪ್ರಾಯೋಜಿಸಲ್ಪಟ್ಟ ''ರಾಷ್ಟ್ರಪತಿ ಪದಕ'' ಉಪರಾಷ್ಟ್ರಪತಿ ಪಾರಿತೋಷಕ ಮತ್ತು ಪ್ರಧಾನ ಮಂತ್ರಿ ಪಾರಿತೋಷಕ ಸ್ಪರ್ಧೆಗಳು ಸ್ಕೌಟ್ ಸಂಸ್ಥೆಯ ರಾಷ್ಟ್ರ ಜೀವನದಲ್ಲಿ ಹಾಸುಹೊಕ್ಕಾಗಿ ಬೆಸೆದುಕೊಂಡಿದೆ. ಈಗ ರಾಜ್ಯ ಮಟ್ಟದ ಪದಕಗಳನ್ನು ರಾಜ್ಯಪಾಲರು ವಿತರಿಸುತ್ತಾರೆ. ಜಿಲ್ಲಾ ಮಟ್ಟದ ಪದಕಗಳನ್ನು ಜಿಲ್ಲಾಧಿಕಾರಿಗಳು ವಿತರಿಸುತ್ತಾರೆ. ಇಂಥ ಕಾರ್ಯಕ್ರಮಗಳಿಂದ ಗ್ರಾಮೀಣ ಮಕ್ಕಳಿಗೆ ಅನುಕೂಲವಾಗಲು ಸಹಕಾರಿಯಾಗುತ್ತದೆ.

ಈ ಪುಟ್ಟ ಬಾಲಕ-ಬಾಲಕಿಯರು ಯಾವ ರೀತಿಯಲ್ಲಿ ದೇಶ ಸೇವೆ ಮಾಡುತ್ತಾರೆ ಎಂದು ನಿಮಗೆ ಆಶ್ಚರ್ಯವೆನಿಸಬಹುದು. ಆದರೆ ಈ ಮಕ್ಕಳು ಸ್ಕೌಟ್ಸ್ , ಗೈಡ್ಸ್ ಆಗಿ ಸ್ಕೌಟ್ ಪ್ರತಿಜ್ಞೆ, ನಿಯಮದಂತೆ ನಡೆದುಕೊಂಡರೆ ಅವರು ದೇಶ ಸೇವೆ ಮಾಡಿದಂತೆಯೇ. ಸ್ಕೌಟ್ಸ್, ಗೈಡ್ಸ್‌ಗಳು ಏನೇ ಮಾಡಿದರೂ, ದೇಶದ ಹಿತವನ್ನು ಮೊದಲು ಯೋಚಿಸಲು ಕಲಿಯುತ್ತಾರೆ. ದೇಶದ ಬಾವುಟವು ಸದಾ ಹಾರಾಡುತ್ತಿರುವಂತೆ ಸ್ಕೌಟ್ಸ್‌ಗಳು ಸೇವೆ ಸಲ್ಲಿಸಲು

ಯಾವನು ಸಂಯಮಿಯೋ, ಅವನೇ ಶಕ್ತಿಶಾಲಿ - ರಾಮಕೃಷ್ಣ ಪರಮಹಂಸ.

ಅವರ ಸ್ಕೌಟ್ಸ್ ವಿಧ್ಯಾಭ್ಯಾಸದಲ್ಲಿ ಅಭ್ಯಾಸ ಮಾಡಿರುತ್ತಾರೆ. ಈ ಸ್ಕೌಟ್ ಆಂದೋಲನದಲ್ಲಿ ಭಾಗವಹಿಸಿದ ಎಲ್ಲಾ ಮಕ್ಕಳು ನಮ್ಮ ರಾಷ್ಟ್ರದ ಉತ್ತಮ ಪೌರರಾಗುತ್ತಾರೆ.

ಇಂದಿನ ಸಮಾಜದಲ್ಲಿ ನಾವು ನೋಡುತ್ತಿರುವ, ಕಾಣುತ್ತಿರುವ, ಕೇಳುತ್ತಿರುವ ದೃಶ್ಯಗಳನ್ನು ನೋಡಿದರೆ ತುಂಬಾ ಚಿಂತಾಜನಕವಾಗುತ್ತಿದೆ. ಕಾರಣ ಈಗಿನ ಮಕ್ಕಳಲ್ಲಿ ಮಾನವೀಯ ಮೌಲ್ಯಗಳ ಶಿಕ್ಷಣದ ಕೊರತೆಯೇ ಕಾರಣ. ಅನೇಕ ದೂರದರ್ಶನಗಳ ಅಶ್ಲೀಲವಾದ ಸನ್ನಿವೇಶಗಳು , ಮಾಧ್ಯಮಗಳ ಪ್ರಚಾರಗಳು, ಸಮಾಜದಲ್ಲಿ ನಡೆಯುತ್ತಿರುವ ದುರ್ನಡತೆ, ಮೋಸ, ವಂಚನೆ, ದರೋಡೆ, ಸುಲಿಗೆ, ಕಳ್ಳತನ, ವ್ಯಭಿಚಾರ ಈ ಎಲ್ಲಾ ಘಟನೆ ನಡೆಯುತ್ತಿರುವುದು ಸರಿಯಾದ ಶಿಕ್ಷಣದ ಕೊರತೆಯೇ ಆಗಿರುವುದರಿಂದ ಪ್ರತಿಯೊಬ್ಬ ಬಾಲಕ ಬಾಲಕಿಯರು ಈ ಸ್ಕೌಟ್ಸ್ ಆಂದೋಲನಕ್ಕೆ ಸೇರಿಕೊಂಡು ಉತ್ತಮ ನಾಗರಿಕನಾಗಲು ಶ್ರಮಿಸಬೇಕು ಹಾಗೂ ಪೋಷಕರು ಸಹಕಾರ ನೀಡಬೇಕೆಂದು ಬೇಡನ್ ಪಾವೆಲ್‌ರವರು ಜನರಿಗೆ ಕರೆ ನೀಡಿರುತ್ತಾರೆ.

ಗಾಂಧಿಜೀಯವರು ಹೇಳಿದ ಹಾಗೆ ಒಬ್ಬ ಇಂಜಿನಿಯರ್ ಒಂದು ಸೇತುವೆಯನ್ನು ಹಾಳು ಮಾಡಿದರೆ ದೇಶಕ್ಕೆ ಅಷ್ಟೇನು ಅನ್ಯಾಯ ಆಗುವುದಿಲ್ಲ. ಆದರೆ ಒಬ್ಬ ಶಿಕ್ಷಕ, ಒಬ್ಬ ಬಾಲಕನಿಗೆ ಸರಿಯಾದ ರೀತಿಯಲ್ಲಿ ವ್ಯಾಸಂಗ ಮಾಡಿಸದಿದ್ದರೆ ಇಡೀ ಸಮಾಜವನ್ನೇ ಹಾಳು ಮಾಡಿದಂತೆ. ಒಂದು ಗೋಡೆಯಲ್ಲಿ ಸಣ್ಣ ಇಟ್ಟಿಗೆಗೂ ಸ್ಥಾನವಿರುತ್ತದೆ. ಆ ಸಣ್ಣ ಇಟ್ಟಿಗೆ ತನ್ನ ಸ್ಥಾನವನ್ನು ಕಳೆದುಕೊಂಡಲ್ಲಿ ಈ ಇಡೀ ದೊಡ್ಡ ಗೋಡೆ ನಾಶವಾಗುತ್ತದೆ.

ನಮ್ಮ ಪೂರ್ವಜರು ಈ ಚಳವಳಿಯನ್ನು ನೀಡಿದ ಈ ಪುರಾತನ ಹಾಗೂ ಮಹಾನ್ ದೇಶದ ಹಿರಿಮೆ, ಗರಿಮೆಗಳನ್ನು ಕಾಪಾಡಿ ಅಭಿವೃದ್ಧಿಗೊಳಿಸುವ ಕರ್ತವ್ಯ ಪ್ರತಿಯೊಬ್ಬನ ಮೇಲಿದೆ ಎಂದು ಸ್ಕೌಟ್ ದೇಶಕ್ಕಾಗಿ ತನ್ನ ಕರ್ತವ್ಯವನ್ನು ಸಲ್ಲಿಸಲು ಬದ್ದನಾಗಿರುತ್ತಾನೆ. ದೇಶ ಪ್ರೇಮ ಮತ್ತು ರಾಷ್ಟ್ರೀಯ ಭಾವೈಕ್ಯತೆಯನ್ನು ಸ್ಕೌಟ್‌ಗಳು ಮೈಗೂಡಿಸಿಕೊಳ್ಳಲು ಸ್ಕೌಟ್ ಆಂದೋಲನ ದೇಶದಲ್ಲಿ ಮಹತ್ತರವಾದ ಪಾತ್ರ ವಹಿಸುತ್ತಿದೆ. ಸ್ಕೌಟ್ ಚಳವಳಿ ತನ್ನ ಈ ಮುಖ್ಯ ಗುರಿಗಳನ್ನು ತಲುಪಲು ಸದಾ ಕಾರ್ಯೋನ್ಮುಖವಾಗಿದೆ.

ಈ ಸಂಸ್ಥೆಯವರು ಬಾಲಕ - ಬಾಲಕಿಯರಿಗಾಗಿ ಈ ಕೆಳಗಿನ ಹಂತದಲ್ಲಿ ತರಬೇತಿಗಳನ್ನು ನೀಡುತ್ತಿದ್ದಾರೆ.

5 ರಿಂದ 10 ವರ್ಷದ ಒಳಗಿನ ಮಕ್ಕಳು - ಕಬ್ಸ್ ಮತ್ತು ಬುಲ್‌ಬುಲ್ಸ್

10 ರಿಂದ 17 ವರ್ಷದ ಮಕ್ಕಳು - ಸ್ಕೌಟ್ಸ್ ಮತ್ತು ಗೈಡ್ಸ್‌ಗಳು

17 ರಿಂದ 25 ವರ್ಷದ ಮಕ್ಕಳು - ರೋವರ್ಸ್ ಮತ್ತು ರೇಂಜರ್ಸ್

ಈ ರೀತಿಯಾಗಿ ವಿಂಗಡಣೆಯಾಗಿ ಶಿಕ್ಷಣ ನೀಡುತ್ತಿದೆ.

ಈಗಿನ ಯುವ ಜನಾಂಗಕ್ಕೆ, ಯುವಕ - ಯುವತಿಯರಿಗಾಗಿ ಈ ಚಳವಳಿಯ ಶಿಕ್ಷಣ ಅವಶ್ಯಕವಾಗಿದೆ. ಘನ ಸರ್ಕಾರದವರು ಹೆಚ್ಚಿನ ತರಬೇತಿ ಕೊಡಿಸಲು ಧನ ಸಹಾಯ ನೀಡುತ್ತಾ ಬಂದಿದೆ. ಇದು ಪಕ್ಷರಹಿತ ಚಳವಳಿಯಾಗಿದೆ. ಯಾವುದೇ ಜಾತಿ ಧರ್ಮ, ಜನಾಂಗಕ್ಕೆ ಮೀಸಲು ಇಲ್ಲದ ಹಾಗೂ ರಾಜಕೀಯ ಹೊರತುಪಡಿಸಿ ನಡೆಯುತ್ತಿರುವ ರಾಷ್ಟ್ರಮಟ್ಟದ ಅಂತರಾಷ್ಟ್ರೀಯ ಮಟ್ಟದ ಏಕೈಕ ಚಳವಳಿಯಾಗಿದೆ. ●

## ನುಡಿ ಮುತ್ತುಗಳು

★ ನಾನು ಎಲ್ಲಾ ಜೀವಿಗಳನ್ನು ಕ್ಷಮಿಸುತ್ತೇನೆ. ನನ್ನನ್ನು ಎಲ್ಲರೂ ಕ್ಷಮಿಸಲಿ. ಎಲ್ಲರ ಬಗ್ಗೆ ನನ್ನಲ್ಲಿ ಮೈತ್ರಿ ಭಾವನೆ ಇದೆ, ನನಗೆ ಜಗತ್ತಿನಲ್ಲಿ ಯಾರೂ ವೈರಿಗಳಿಲ್ಲ .

★ '' ಕೊಲೆ, ಹುಸಿ, ಕಳವು, ಪರದಾರ ಮತ್ತು ಅರೆಕಾಂಕ್ಷೆ '' ಇವು ಪಂಚಪಾಪಗಳು. ಆದ್ದರಿಂದ ಇವನ್ನು ಬಿಟ್ಟು ''ಅಹಿಂಸೆ, ಸತ್ಯ, ಅಚೌರ್ಯ, ಬ್ರಹ್ಮಚರ್ಯ ಮತ್ತು ಅಪರಿಗ್ರಹ''ವನ್ನು ಪ್ರತಿಯೊಬ್ಬರೂ ಧಾರಣೆ ಮಾಡಬೇಕು.

★ ಸಮ್ಯಕ್‌ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರ್ಯ ಇವು ರತ್ನತ್ರಯಗಳು, ಇವುಗಳಿಂದಲೇ ಮುಕ್ತಿ ಸಾಧ್ಯ.

★ ಜ್ಞಾನ ದೃಷ್ಟಿಯಿಂದ ಆತ್ಮನನ್ನು ಅರಿಯಬೇಕು.

★ ಉಪಕಾರ ಸತ್ಪರಿಣಾಮಗಳೇ ಪುಣ್ಯ, ಅಪಕಾರ ದುಷ್ಪರಿಣಾಮಗಳೇ ಪಾಪ.

★ ಅವರವರು ಮಾಡಿದ ಕರ್ಮದ ಫಲಗಳನ್ನು ಅವರವರೇ ಅನುಭವಿಸಬೇಕು.

★ ನಿರ್ದೋಷಿಯು, ಸರ್ವಜ್ಞನೂ ಮತ್ತು ಹಿತೋಪದೇಶಿಯು ಆದವನೇ ನಿಜವಾದ ದೇವರು.

★ ಸಕಲ ಜೀವರಾಶಿಗಳಿಗೂ ಹಿತವನ್ನು ಬಯಸುವುದೇ ಧರ್ಮ

★ ಆತ್ಮ , ಪರಮಾತ್ಮ , ಕರ್ಮ, ಪ್ರಪಂಚ, ಧರ್ಮ ಪರಂಪರೆಗಳು ಅನಾದಿ ಕಾಲದಿಂದಲೂ ಇವೆ.

★ ಅಹಿಂಸೆಯೇ ಪರಮಧರ್ಮ, ಅದೇ ವಿಶ್ವಧರ್ಮ.

ಉಸಿರು ಯಾವಾಗ ನಿಲ್ಲೈತಿ ?ಯಾರಿಗ್ಗೊತ್ತು ?
ವಿಚಾರ ಮಾಡು !
ಉಸಿರು ನಿಲ್ಲೋ ಮೊದಲು, ಊರಾಗ,
ಹೆಸರು ನಿಲ್ಲೋ ಕೆಲಸಾ ಮಾಡು

– ಇ.ಈ.

ಅತ್ಯಂತ ಶಾಶ್ವತವಾದದ್ದು ಬದಲಾವಣೆ - ದುರ್ಯೋಧನ.



# ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ದೇಶದ ಸತ್ಪ್ರಜೆಗಳು

ಶ್ರೀಮತಿ ಹೆಚ್.ಎಂ.ಪುಟ್ಟಮ್ಮ ಮಹಾರುದ್ರಯ್ಯ
ಜಿಲ್ಲಾ ಸಹಾಯಕ ಆಯುಕ್ತರು (ಗೈಡ್) ದಾವಣಗೆರೆ.

ಕರ್ನಾಟಕ ರಾಜ್ಯವು ಇಡೀ ರಾಷ್ಟ್ರದಲ್ಲಿ ತನ್ನದೇ ಆದ ವಿಶಿಷ್ಟ ಸ್ಥಾನವನ್ನು ಉಳಿಸಿಕೊಂಡಿದೆ. ಹಾಗೆಯೇ ತನ್ನ ವೈಶಿಷ್ಟ್ಯವನ್ನು ನಿರಂತರವಾಗಿ ತನ್ನದಾಗಿಸಿಕೊಳ್ಳಲು ಅಂತರಾಷ್ಟ್ರೀಯ ಸಂಸ್ಥೆಯ ಮಹಾ ಮೌಲ್ಯಗಳನ್ನು , ಉದಾತ್ತ ಆದರ್ಶಗಳನ್ನು , ವಿಶ್ವಭ್ರಾತೃತ್ವ ದೈವದಲ್ಲಿರುವ ಅಪಾರ ನಂಬಿಕೆ ಇವುಗಳ ಮೊರೆ ಹೊಕ್ಕಿದೆ. ಅಂತಹ ಮಹಾನ್ ಸಂಸ್ಥೆಯ ಘನತೆ, ಗಾಂಭೀರ್ಯ, ಶ್ರಮ, ಸೇವೆ, ಶಿಸ್ತು , ಪರಸ್ಪರ ಸಹಾಯ, ಸಹಬಾಳ್ವೆಯಂತಹ ಶ್ರೇಷ್ಠ ಗುಣಗಳನ್ನು ''ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ಭಾರತದ ಕೋಟಿ ಕೋಟಿ ಮಕ್ಕಳ ಮನದಲ್ಲಿ ಸತ್ಪ್ರಜೆಯ ಬೀಜಗಳನ್ನು ಬಿತ್ತುತ್ತಿದೆ. ಹಿರಿಯರ ವಾಣಿಯಂತೆ ಮಕ್ಕಳ ಮನಸ್ಸು ಹಸಿ ಗೋಡೆಯಲ್ಲಿ ಹರಳು ನೆಟ್ಟಂತೆ'' ಎಂದು, ಗಟ್ಟಿಯಾಗಿ ಮನದಲ್ಲಿ ಮೂಡುತ್ತದೆ. ಸುಂದರ, ಸುಕೋಮಲ, ಸುಮಧುರ ಬೀರುವ ಹೂವುಗಳಿದ್ದಂತೆ ಆ ಪುಟ್ಟ ಮನಸ್ಸುಗಳು ಅಲ್ಲಿ ಕಪಟ ಮೋಸಕ್ಕೆ ಅವಕಾಶವೇ ಇಲ್ಲ.

''ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೇ'' ಎಂಬ ಗಾದೆಯಂತೆ ಈ ಪುಟ್ಟ ಮಕ್ಕಳಲ್ಲಿ ನಾವು ಪರಿವರ್ತನೆ ಮಾಡಲು ಸಾಧ್ಯ. ಅದು ಹೇಗೆ ಎಂದು ಯೋಚಿಸಿದಲ್ಲಿ ಈ ಭವ್ಯ ಸಂಸ್ಥೆ ನಮ್ಮ ಕಣ್ಣೆದುರಿಗೆ ನಿಲ್ಲುತ್ತದೆ. ನಾವು ಭೂಮಿ ಹದವಾದಾಗ ಬಿತ್ತಿದರೆ ಉತ್ತಮ ಬೆಳೆ ತೆಗೆಯಲು ಸಾಧ್ಯ. ಮಕ್ಕಳ ಮನಸ್ಸು ಹದವಾದ ಭೂಮಿ ಇದ್ದಂತೆ, ಪರಿಶುದ್ಧವಾಗಿರುತ್ತದೆ; ನಿರ್ಮಲವಾಗಿರುತ್ತದೆ. ಅವರ ಆರನೇ ವಯಸ್ಸಿನಲ್ಲಿಯೇ ಬಾಲಕಿ ''ಬುಲ್ ಬುಲ್'' ಆಗಿ ಬಾಲಕ ''ಕಬ್'' ಆಗಿ ಸದ್ಗುಣದ ಮೊದಲನೆ ಹೆಜ್ಜೆಯನ್ನು ಮಾನವ ಸಮಾಜದಲ್ಲಿ ಗಟ್ಟಿಯಾಗಿ ಊರುತ್ತಾನೆ. ತೆನೆ ಬಿಟ್ಟ ಭತ್ತ ಬಾಗುತ್ತದೆ, ಗೊನೆ ಬಿಟ್ಟ ಬಾಳೆ ಬಾಗುತ್ತದೆ. ಫಲಬಿಟ್ಟ ಮಾವು ಬಾಗುತ್ತದೆ. ಏನೇನೂ ಇಲ್ಲದ ಈ ದೇಹ ಬೀಗುತ್ತದೆ. ಬೀಗುವುದರಲ್ಲಿಲ್ಲ , ಬಾಗುವುದರಲ್ಲಿದೆ ಎಂಬ ವಿನಯದ ಸಂದೇಶವನ್ನು ಸಾರುವ ವ್ಯಕ್ತಿ ಮಾದರಿ ಸಮಾಜದ ನಿರ್ಮಾಣಕ್ಕೆ ನಾಂದಿಯಾಗುತ್ತಾನೆ, ಪ್ರೇರಕರಾಗುತ್ತಾರೆ. ಬೆಳೆಯುವ ಸಿರಿ ಮೊಳಕೆಯಲ್ಲಿಯೇ ನೋಡಿ ಎನ್ನುವಂತೆ ಕೆಲವು ಮಕ್ಕಳು ಹುಟ್ಟಿನಿಂದಲೇ ಉದಾತ್ತ ಗುಣಗಳನ್ನು ಮೈಗೂಡಿಸಿಕೊಂಡಿರುತ್ತಾರೆ. ಇನ್ನು ಕೆಲವು ಮಕ್ಕಳು ಸಮಯಕ್ಕೆ ಅನುಗುಣವಾಗಿ, ಪರಿಸರಕ್ಕೆ ಹೊಂದಿಕೊಂಡು ಕಲಿಯುವ ಸಾಧ್ಯತೆಯು ಇದೆ. ಆ ವಾತಾವರಣವನ್ನು ರೂಪಿಸುವ ಮಾದರಿಯೇ ಸ್ಕೌಟಿಂಗ್, ಗೈಡಿಂಗ್ ಎಂದು ಹೇಳಬಹುದು.

'ಮೂರು ವರ್ಷದ ಬುದ್ಧಿ ನೂರು ವರ್ಷದವರೆಗೆ' ಎನ್ನುವಂತೆ ಉತ್ಸಾಹದ ಚಿಲುಮೆಗಳಾದ ಚೈತನ್ಯದ ಸೆಲೆಯಂತಿರುವ ಪುಟ್ಟ ಮಕ್ಕಳ ಹೃದಯವನ್ನು ಈ ಸಂಸ್ಥೆಯು ಆಕರ್ಷಿಸುತ್ತದೆ, ಮುದ ನೀಡುತ್ತದೆ. ಸ್ಕೌಟ್ ಮತ್ತು ಗೈಡ್ ಸಂಸ್ಥೆಯ ಆದರ್ಶ ಗುರಿಗಳು, ನೀತಿ ನಿಯಮಗಳು, ವಿನಯ-ವಿಧೇಯತೆಗಳು, ಉತ್ತಮ ವ್ಯಕ್ತಿತ್ವ ನಿರ್ಮಾಣ, ಮುಂದಾಳತ್ವದ ಗುಣಗಳನ್ನು ಮೈಗೂಡಿಸಿಕೊಳ್ಳುವುದು ಇದರ ವೈಶಿಷ್ಟ್ಯ. ಅಷ್ಟೇ ಅಲ್ಲ 'ಕೂಡಿ ಕಲಿ, ಆಡಿ ನಲಿ' ಎನ್ನುವಂತೆ ತಮಗೆ ಅರಿವಿಲ್ಲದೆ ಮಕ್ಕಳ ಮನದಲ್ಲಿ ಸದ್ಗುಣಗಳು ಮೂಡುತ್ತಾ ಬರುತ್ತದೆ. ಹಾಡು ಹಾಡುತ್ತಾ, ಆಟ ಆಡುತ್ತಾ, ಸಮವಸ್ತ್ರದ ಉಡುಗೆಯೊಂದಿಗೆ ಶಿಸ್ತನ್ನು ಪಾಲಿಸುವ ಹವ್ಯಾಸ ಅವರದಾಗುತ್ತದೆ. ಸಾಹಸದ ಚಟುವಟಿಕೆ ಅಂದರೆ ಸೈಕಲ್ ಪ್ರವಾಸ, ಚಾರಣ, ಅಡಿಗೆಯ ಕಲೆ, ಕರ ಕುಶಲಕಲೆ ಇವರ ಪಾಲಿಗಿದೆ.

''ಇಂದಿನ ಮಕ್ಕಳೇ ಮುಂದಿನ ಪ್ರಜೆಗಳು'' ಎಂಬ ಉಕ್ತಿಯಂತೆ ಮಕ್ಕಳು ಧರ್ಮಶೀಲ, ಕ್ರಿಯಾಶೀಲ, ಪ್ರಗತಿಶೀಲ, ಗುಣಶೀಲ ವ್ಯಕ್ತಿಗಳಾಗಲು ಈ ಸಂಸ್ಥೆ ಪೂರಕವಾಗಿದೆ. ಸತ್ಯ, ದಯೆ, ಪ್ರೀತಿ, ಕರುಣೆ, ಸ್ನೇಹ, ಸೌಹಾರ್ದತೆಯ ಕಡೆ ಇವರುಗಳ ಮನ ವಾಲುತ್ತದೆ. ಜಾತಿಬೇಧ, ಮೇಲುಕೀಳು, ಬಡವ ಬಲ್ಲಿದನೆಂಬ ಬೇಧ-ಭಾವ ಅವರಲ್ಲಿ ಸುಳಿಯುವುದೆ ಇಲ್ಲ. ರಾಷ್ಟ್ರ ಪ್ರೇಮಿಗಳಾಗುವರಲ್ಲದೆ, ಪರಿಸರವಾದಿಗಳಾಗಿ, ಸಮಾಜ ಸೇವೆ ಮಾಡುವ ಮುಖಂಡತ್ವದ ಗುಣ ಅವರಲ್ಲಿ ಕಂಡು ಬರುತ್ತವೆ. (Be prepared) ಸದಾ ಸಿದ್ಧನಾಗಿರು (Scouting is outing) ಹೊರಸಂಚಾರದಲ್ಲಿ ಪ್ರಕೃತಿಯೇ ಇವರಿಗೆ ಪಾಠ ಕಲಿಸುತ್ತದೆ. ಜಿಲ್ಲಾ ಮಟ್ಟದ, ರಾಜ್ಯ ಹಾಗೂ ರಾಷ್ಟ್ರ ಮಟ್ಟದ ಪ್ರಶಸ್ತಿ ಪುರಸ್ಕಾರಗಳು ಮಕ್ಕಳನ್ನು ಕೈಬೀಸಿ ಕರೆಯುತ್ತವೆ.

ಮೇಲ್ಕಂಡ ಎಲ್ಲಾ ಆದರ್ಶ ಗುಣಗಳು ವ್ಯಕ್ತಿತ್ವ ವಿಕಾಸಕ್ಕೆ ಈ ಮೇರು ಸಂಸ್ಥೆಗಳೇ ಉದಾಹರಣೆ ಮತ್ತು ತಳಹದಿ ಹಾಕಿದಲ್ಲಿ ಕಟ್ಟಡವು ಭದ್ರವಾಗಿ ನಿಲ್ಲುವಂತೆ ಆ ಭದ್ರ ಬುನಾದಿಯ ಬೀಜ ಮಂತ್ರವೇ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ . ಈ ಶ್ರೇಷ್ಠ ಗುಣಗಳ ಸರಮಾಲೆಗೆ ಕಾರಣರಾದವರು ಯಾರು ಗೊತ್ತೇ? ಅವರೇ ಲಾರ್ಡ್ ಬೇಡನ್ ಪೊವೆಲ್ ಆಫ್ ಗಿಲ್‌ವೆಲ್ (ಸ್ಕೌಟ್ ಸಂಸ್ಥೆಯ ಸಂಸ್ಥಾಪಕರು) ವಿಶ್ವ ಚೀಫ್ ಗೈಡ್ ಲೇಡಿ ಬೇಡನ್ ಪೊವೆಲ್ (ಸಂಸ್ಥಾಪಕರ ಪತ್ನಿ) ಇವರನ್ನು ಸ್ಮರಿಸುವುದು ನಮ್ಮೆಲ್ಲರ ಆದ್ಯ ಕರ್ತವ್ಯ. ಅಂತೆಯೇ ಸನ್ಮಾನ್ಯ ಶ್ರೀ ಕೊಂಡಜ್ಜಿ ಬಸಪ್ಪನವರು ನಮ್ಮ ಜಿಲ್ಲೆಯ ಆಧಾರಸ್ತಂಭ ಎಂದರೂ ತಪ್ಪಾಗಲಿಕ್ಕಿಲ್ಲ.

ಗಣ್ಯ ಮಾನ್ಯ ಮಹನೀಯರನ್ನು ಗೌರವದಿಂದ ಸ್ಮರಿಸುತ್ತಾ ಎಲ್ಲಾ ಬುಲ್ ಬುಲ್, ಕಬ್ಸ್, ಸ್ಕೌಟ್ಸ್ ಮತ್ತು ಗೈಡ್ಸ್ ಬಾಲಕ ಬಾಲಕಿಯರು ಆದರ್ಶ ವ್ಯಕ್ತಿಗಳಾಗುತ್ತಾರೆಂಬುದರಲ್ಲಿ ಯಾವ ಸಂದೇಹವೂ ಇಲ್ಲ.

●

ಕಾಲದ ಅರಿವುಳ್ಳವನು ಮಾತ್ರ, ಕಾರ್ಯವನ್ನು ಸಾಧಿಸಿಯಾನು - ಚಾಣಕ್ಯ.



# ಸಮುದಾಯ ಮತ್ತು ನಾವು

ರವಿ ವೆಸ್ಲಿ
ರಾಜ್ಯ ಸ್ಥಾನಿಕ ಆಯುಕ್ತರು,
ರಾಷ್ಟ್ರ ಕಾರ್ಯಕಾರಿ ಸಮಿತಿ ಸದಸ್ಯರು,
ಕರ್ನಾಟಕ, ಬೆಂಗಳೂರು.

ನಾವು ವಾಸಿಸುವ, ನಾವು ಪ್ರತಿ ದಿನವೂ ವ್ಯವಹರಿಸುವ ನಮಗೆ ಮೂಲಭೂತ ಸೌಲಭ್ಯಗಳನ್ನು ಒದಗಿಸುವ, ನಮ್ಮ ಸಹಚರರನ್ನು ಮತ್ತು ಪ್ರಕೃತಿಯನ್ನು ಒಳಗೊಂಡಿರುವ ಸೀಮಿತ ವಲಯವೇ ಸಮುದಾಯ. ಪ್ರತಿಯೊಂದು ಹಳ್ಳಿಯೂ ಒಂದೊಂದು ಸಮುದಾಯ ನಗರಗಳಲ್ಲಿ ಮಹಾನಗರಗಳಲ್ಲಿ ಒಂದೊಂದು ಬಡಾವಣೆಯೂ, ಒಂದೊಂದು ಸಮುದಾಯ. ಇಂತಹ ಅನೇಕಾನೇಕ ಸಮುದಾಯಗಳು ಸೇರಿ ಸಮಾಜವಾಗುತ್ತದೆ.

ಸಮುದಾಯ ನಮಗೆ ಬೇಕಾದ ಎಲ್ಲಾ ಸವಲತ್ತುಗಳನ್ನು ಕೊಡುತ್ತದೆ. ಅಂದರೆ ರಸ್ತೆ, ಸಾರಿಗೆ, ನೀರು, ವಿದ್ಯುತ್, ಸಂಪರ್ಕ ಮಾಧ್ಯಮಗಳು, ರಕ್ಷಣೆ ಮಾರುಕಟ್ಟೆ ಆಸ್ಪತ್ರೆ, ದೇವಾಲಯಗಳು, ಮನರಂಜನೆ ಹೀಗೆ ಹತ್ತು ಹಲವು ಸೌಲತ್ತುಗಳನ್ನು ಕೊಡುತ್ತದೆ. ಇವೆಲ್ಲವೂ ಯಾರಿಗೆ ಸೇರಿದ್ದು ? ಎಂದರೆ ಇವುಗಳು ಸಾರ್ವಜನಿಕರ ಆಸ್ತಿ ಎನ್ನುತ್ತೇವೆ. ಈ ಸಾರ್ವಜನಿಕರು ಯಾರು? ನಾವೇ. ಈ ಆಸ್ತಿಯಲ್ಲಿ ನಮ್ಮ ಹಣವು ತೆರಿಗೆಯ ರೂಪದಲ್ಲಿರುತ್ತದೆ. ಇವುಗಳನ್ನು ಅಪವ್ಯಯ ಮಾಡಿದರೆ, ಹಾಳು ಮಾಡಿದರೆ, ನಮಗೆ ತೆರಿಗೆ ಏರುತ್ತದೆ. ಇವುಗಳು ಭೌತಿಕ ಸವಲತ್ತುಗಳಾದರೆ, ಸಮುದಾಯ ಭಾವನಾತ್ಮಕವಾಗಿ, ಸ್ನೇಹ, ಸಂಬಂಧ, ಸುರಕ್ಷತೆಯನ್ನು ನೀಡುತ್ತದೆ. ಇದರಿಂದಾಗಿ ನಮಗೆ ನಮ್ಮ ಸಮುದಾಯದ ಬಗ್ಗೆ ಸ್ವಂತಿಕೆ ಮತ್ತು ಒಲವು ತಾನಾಗಿಯೇ ಬೆಳೆಯುತ್ತದೆ.

ರಾಷ್ಟ್ರದ ಎಲ್ಲಾ ನಾಗರೀಕರು, ತಮ್ಮ ತಮ್ಮ ಸಮುದಾಯದ ಕಾಳಜಿ ವಹಿಸಬೇಕು. ಅದರಲ್ಲೂ ಸ್ಕೌಟ್ ಮತ್ತು ಗೈಡ್‌ಗಳಾಗಿ ನಾವೆಲ್ಲರೂ ನಮ್ಮ ಸಮುದಾಯದ ಆಸ್ತಿಯನ್ನು ಸಂರಕ್ಷಿಸುವ ಮತ್ತು ಅಭಿವೃದ್ಧಿಗೊಳಿಸುವ ಜವಾಬ್ದಾರಿಯನ್ನು ವಹಿಸಿಕೊಳ್ಳಬೇಕು. ಇದಕ್ಕಾಗಿ ನಾವು '' ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಸಾರ್ವಜನಿಕ ಆಸ್ತಿಯನ್ನು ರಕ್ಷಿಸುವವರು'' ಎಂಬ ನಿಯಮದ ಅಂಶವನ್ನು ಒಪ್ಪಿಕೊಂಡಿದ್ದೇವೆ, ಸಮುದಾಯ ಸೇವೆ, ದೇಶ ಸೇವೆ, ಪ್ರತಿಜ್ಞೆ ಯಲ್ಲಿ ''ದೇಶಕ್ಕೆ ನಾವು ಕರ್ತವ್ಯ ಸಲ್ಲಿಸುತ್ತೇನೆಂದು'' ವಚನ ನೀಡಿರುತ್ತೇವೆ. ''ದೇಶ ಸೇವೆಯೇ ಈಶ ಸೇವೆ'' ದೇಶಕ್ಕೆ ನಾವು ಮಾಡುವ ಕರ್ತವ್ಯವೆ ದೇವರ ಪೂಜೆ. ದೇವರಿಗೆ ಕರ್ತವ್ಯ ಸಲ್ಲಿಸುತ್ತೇನೆಂದು ವಚನ ನೀಡಿರುತ್ತೇವೆ. ''ಸೇವೆಗಾಗಿ ಸದಾ ಸಿದ್ಧ '' ಎಂಬ ಗುರಿಯತ್ತ ಸಾಗುತ್ತೇವೆ. ನಮ್ಮ ಕಾರ್ಯಕ್ರಮದಲ್ಲಿ ಸಮುದಾಯ ಸೇವೆಯನ್ನು ಕಡ್ಡಾಯವಾಗಿ ಅಳವಡಿಸಲಾಗಿದೆ. ಇದರ ಜೊತೆಜೊತೆಗೆ ಸಮುದಾಯ ಸೇವೆಯನ್ನು ಪ್ರೋತ್ಸಾಹಿಸಲು ''ಗ್ರಾಮೀಣ ಕಾರ್ಯಕರ್ತರು'' ಸಮುದಾಯ ಕಾರ್ಯಕರ್ತರು ಎಂಬ ವಿಶೇಷ ಕಾರ್ಯಕ್ರಮವನ್ನು ಸಮರ್ಪಕವಾಗಿ ಮಾಡಿದ್ದೇ ಆದರೆ ಪ್ರಾವೀಣ್ಯತಾ ಪದಕವನ್ನು ನೀಡಲಾಗುವುದು. ಸಮುದಾಯ ಸೇವೆ ನಮ್ಮ ಕಾಳಜಿ ಆಗಬೇಕು. ಅಭ್ಯಾಸವಾಗಬೇಕು. ನಮ್ಮ ಜವಾಬ್ದಾರಿಯಾಗಬೇಕು, ಮನೋಧರ್ಮವಾಗಬೇಕು. ನಾವು ನಮ್ಮ ಸಮುದಾಯದ ಕಾವಲು ಪಡೆಯಾಗಬೇಕು. ಇದಕ್ಕಾಗಿ ವಿಶ್ವ ಸಂಸ್ಥೆಯು ಉದ್ಘೋಷಿಸಿರುವ ''ಸ್ಥಳೀಯವಾಗಿ ಕಾರ್ಯೋನ್ಮುಖರಾಗಿ ವಿಶ್ವದ ಬಗ್ಗೆ ಚಿಂತನೆ ಮಾಡಿ'' ಎಂಬ ಕರೆಗೆ ಓಗೊಡಬೇಕು.

ಸಮುದಾಯ ಸೇವೆಯಲ್ಲಿ ಎರಡು ವಿಧ. 1. ಸಂರಕ್ಷಣೆ 2. ಅಭಿವೃದ್ಧಿ . ಈ ಕೆಳಗೆ ಸೇವೆಗೆ ಸಂಬಂಧಿಸಿದ ಕೆಲವು ಸೇವಾ ಯೋಜನೆಗಳ ಕ್ಷೇತ್ರಗಳನ್ನು ಕೊಡಲಾಗಿದೆ.

1. ಸಾಕ್ಷರತೆ, 2. ಹೆಣ್ಣುಮಕ್ಕಳ ಸಮಸ್ಯೆಗಳು 3. ಬಾಲ ಕಾರ್ಮಿಕರ ಸಮಸ್ಯೆಗಳು 4. ಆರೋಗ್ಯ ಸಮಸ್ಯೆಗಳು 5. ಸಾಮಾಜಿಕ ಸಮಸ್ಯೆಗಳು 6. ಮಾಲಿನ್ಯತೆ ಸಮಸ್ಯೆಗಳು 7. ಸಾರ್ವಜನಿಕ ಸೌಲಭ್ಯಗಳ ಸಂರಕ್ಷಣೆ ಮತ್ತು ಅಭಿವೃದ್ಧಿ 8. ಪರಿಸರ ಸಂರಕ್ಷಣೆ 9. ಶಾಂತಿ ಸಂರಕ್ಷಣೆ 10. ಯುದ್ಧ ಸಮಸ್ಯೆ 11. ವಂಚಿತರಿಗೆ ನೆರವು ಮತ್ತು ಅವರ ಅಭಿವೃದ್ಧಿ 12. ನೀರಿನ ಸಮಸ್ಯೆಗಳು.

ಇವೆಲ್ಲವನ್ನೂ ನಮ್ಮ ಸ್ಕೌಟ್ ಮತ್ತು ಗೈಡ್ ದಳಗಳು ಅವರವರ ಸಮುದಾಯದಲ್ಲೇ ಮಾಡಬಹುದು. ಇವುಗಳಲ್ಲದೆ ನಮ್ಮ ಜಿಲ್ಲೆ, ರಾಷ್ಟ್ರ ಹಾಗೂ ಅಂತರಾಷ್ಟ್ರೀಯ ಸಂಸ್ಥೆಗಳು, ಯೋಜನಾ ಕಾರ್ಯಕಗಳನ್ನು ಪ್ರಕಟಿಸುತ್ತವೆ. ಇವುಗಳನ್ನು ನೀವು, ಅಷ್ಟಕದಲ್ಲಿ ದಳದಲ್ಲಿ ಹಮ್ಮಿಕೊಳ್ಳಬಹುದು. ಇವುಗಳು ದೊಡ್ಡ ಪ್ರಮಾಣದ್ದಾಗಿದ್ದರೆ. ಇತರ ಸ್ವಯಂ ಸೇವಕ ಸಂಘಟನೆಗಳ ಜೊತೆಗೂಡಿ ಮಾಡಬಹುದು. ಈ ಕಾರ್ಯ ಮಾಡಿದ ನಂತರ ಚಿತ್ರ ಸಹಿತ ವಿವರವಾದ ವರದಿಯನ್ನು ಪುಸ್ತಕ ರೂಪದಲ್ಲಿ ರಾಜ್ಯ, ರಾಷ್ಟ್ರ , ಅಂತರಾಷ್ಟ್ರೀಯ ಸಂಸ್ಥೆಗಳಿಗೆ ಕಳುಹಿಸಿ ನಿಮ್ಮ ಕಾರ್ಯ ಅವರಿಗೆ ಮೆಚ್ಚುಗೆಯಾದರೆ, ಈ ಕೆಳಗಿನ ಪುರಸ್ಕಾರವನ್ನು ನೀಡುವರು.

1. ರಾಜ್ಯ ಮಟ್ಟದಲ್ಲಿ ಸ್ಕೌಟ್-ಗೈಡ್ ರಾಜ್ಯಪಾಲರ ಪುರಸ್ಕಾರ.

2. ರಾಷ್ಟ್ರಮಟ್ಟದಲ್ಲಿ 1.) ಶ್ರೀಮತಿ ಲಕ್ಷ್ಮೀ ಮುಜುಂದಾರ್ ಪುರಸ್ಕಾರ, 2.) ಉಪರಾಷ್ಟ್ರಪತಿ ಪುರಸ್ಕಾರ, 3) ಪ್ರಧಾನಮಂತ್ರಿ ಪುರಸ್ಕಾರ,

3. ಅಂತರಾಷ್ಟ್ರೀಯ ಮಟ್ಟದಲ್ಲಿ ಶ್ರೀಮತಿ ಆಲೇವ್ ಪುರಸ್ಕಾರ, (ಗೈಡ್ಸ್‌ಗಳಿಗೆ ಮಾತ್ರ)

ಇವುಗಳಲ್ಲದೆ ಸಾರ್ವಜನಿಕರು ಮತ್ತು ಘನ ಸರ್ಕಾರ ನೀಡುವ ವಿವಿಧ ಪುರಸ್ಕಾರಗಳಲ್ಲಿ ಇಷ್ಟೆಲ್ಲಾ ಮಾಡುವುದು ಹೇಗೆ? ಒಂದೇ ಬಾರಿಗೆ ಮಾಡಲು ಸಾಧ್ಯವೇ ಎಂಬ ಸಮಸ್ಯೆಗಳು ಕಾಡುತ್ತವೆ. ಪ್ರಾಮಾಣಿಕವಾಗಿ ವರ್ಷಕ್ಕೆ ಒಂದೋ ಎರಡೋ ಫಲಕಾರಿಯಾಗುವಂತಹ ಸೇವೆ ನೋಡೋಣ. ಇದರಿಂದ ನಮಗೇನು ಲಾಭ ? ಜನರ ಮನ್ನಣೆ ಸಿಗುತ್ತದೆ. ಅನುಭವಗಳು ಹೆಚ್ಚುತ್ತವೆ. ರಾಷ್ಟ್ರ ಕಾರ್ಯದಲ್ಲಿ ತೊಡಗಿದ್ದೇವೆ ಎಂಬ ತೃಪ್ತಿ ಸಿಗುತ್ತದೆ.

ಸೇವೆ ಒಂದು ''ಮೌಲ್ಯ'' ಇದು ಬೇಧ ಭಾವವನ್ನು ಮರೆಸುತ್ತದೆ. ವಿಶ್ವದ ಯಾವ ರಾಷ್ಟ್ರದಲ್ಲಿ ಕ್ಷಾಮ ಬರಲಿ , ದೈತ್ಯ ಅಲೆ ಅಪ್ಪಳಿಸಲಿ, ಬಿರುಗಾಳಿ ಬೀಸಲಿ ಇದರಿಂದಾಗುವ ಕಷ್ಟ ನಷ್ಟಗಳಿಗೆ ಇಡೀ ವಿಶ್ವವೇ ಟೊಂಕಕಟ್ಟಿ ನಿಲ್ಲುತ್ತದೆ. ಏಕೆಂದರೆ ಎಲ್ಲಾ ಮಾನವರು ಆಗೋಚರವಾದ ಮಾನವೀಯತೆಯ ತಂತುವಿನಿಂದ ಬಂಧಿಸಲ್ಪಟ್ಟಿದ್ದೇವೆ. ಮಾನವ ಜನ್ಮ ದೊಡ್ಡದು. ಸೇವೆ ಮಾಡುವ ಅವಕಾಶ ನಮಗೆ ಮಾತ್ರವಿದೆ. ಎಲ್ಲಾ ಧರ್ಮಗಳು '' ಸೇವೆಯೇ ಮಾನವನ ಪರಮ ಧರ್ಮವೆಂದು'' ಸಾರಿವೆ. ಬಿ.ಪಿ.ಯವರು ಒಬ್ಬ ಮಾನವ, ನಿಜ ಅರ್ಥದಲ್ಲಿ ಮಾನವ. ಅವರು ಕೇಳಿದಾಗ ''ಸ್ಕೌಟುಗಳು ನಾವೇನು ಮಾಡಬೇಕೆಂದು ದಿನಕ್ಕೊಂದು ಸತ್ಕಾರ್ಯ ಮಾಡಿ'' ಎಂದರು. ಅದರ ಅರ್ಥ ಸಹಾಯ . ಸೇವೆ ಯಾರಿಗೆ ಎಂದರೆ ಅವಶ್ಯಕತೆ ಇರುವ ಎಲ್ಲರಿಗೂ ಮತ್ತು ಸಮ ಸೃಷ್ಟಿಗೆ . ಈ ಸ್ವಯಂ ಸೇವಕ ಚಳುವಳಿಯು 2007ರಲ್ಲಿ ಶತಾಯುಷಿ ಆಗಲಿದೆ. ಈ ಆಯುಷ್ಯದ ಗುಟ್ಟು ಸೇವೆ. ಈ ಚಳುವಳಿ ಚಿರಾಯುವಾಗಲ್ಲಿ ಸಂಶಯವಿಲ್ಲ. ●

ಆತ್ಮಹತ್ಯೆಗಿಂತ ಹೇಯವಾದ ಪಾಪವು, ಬೇರೊಂದಿಲ್ಲ - ದಶಕುಮಾರ ಚರಿತ.



# ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ದರ್ಶನ

ಎನ್. ಶ್ರೀನಿವಾಸನ್
ಎಲ್.ಟಿ. (ಸ್ಕೌಟ್ಸ್)

''ಅತ್ಯಂತ ದೊಡ್ಡ ಯುವ ಚಳುವಳಿಯಾದ 'ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್' ಸಂಸ್ಥೆಯು 2013ರ ವೇಳೆಗೆ ಸ್ವಾವಲಂಬಿಯಾದ, ಮೌಲ್ಯಾಧಾರಿತವಾದ, ಗುಣ ನಿರ್ದೇಶಿತ, ಉತ್ತಮ ಆಡಳಿತ ವ್ಯವಸ್ಥೆ ಹೊಂದಿದ ಮತ್ತು ಯುವ ಜನತೆಯ ಅವಶ್ಯಕತೆಗಳಿಗೆ ಅನುಸಾರವಾಗಿ ಸವಾಲಿನಿಂದ ಕೂಡಿದ ನವೀನವಾದ ಕಾರ್ಯಕ್ರಮಗಳನ್ನು ನೀಡುವ ಸಂಸ್ಥೆ ಆಗುತ್ತದೆ.

ಮುಂದಿನ ಹತ್ತು ವರ್ಷಗಳಲ್ಲಿ, ನಮ್ಮಲ್ಲಿ ಆಗಬೇಕಾದ ಪ್ರಮುಖ ಬದಲಾವಣೆಗಳನ್ನು ಗಮನದಲ್ಲಿಟ್ಟುಕೊಂಡು ನಮ್ಮ ರಾಷ್ಟ್ರೀಯ ಸಂಸ್ಥೆಯವರು 2003ರಲ್ಲಿ ರೂಪಿಸಿ, ಅಂಗೀಕರಿಸಿದ ದರ್ಶನ ನಿರೂಪಣೆಯೇ ಇದು.

ವಿಶ್ವ ಸ್ಕೌಟ್ಸ್ ಸಂಸ್ಥೆಯ ಧ್ಯೇಯವೇ ಇದಕ್ಕೆ ಆಧಾರ. 1999ರಲ್ಲಿ ದರ್ಬಾನ್‌ನಲ್ಲಿ ನಡೆದ ವಿಶ್ವ ಸಮ್ಮೇಳನದಲ್ಲಿ ಅಂಗೀಕರಿಸಲ್ಪಟ್ಟ ಧ್ಯೇಯ ಹೀಗಿದೆ.

''ಸ್ವಯಂ ಪರಿಪೂರ್ಣ ವ್ಯಕ್ತಿಗಳಾಗಿರುವ, ಮತ್ತು ಸಮಾಜದಲ್ಲಿ ರಚನಾತ್ಮಕ ಪಾತ್ರ ನಿರ್ವಹಿಸುವ ಪ್ರಜೆಗಳನ್ನು ಹೊಂದಿರುವ ಉತ್ತಮ ವಿಶ್ವ ನಿರ್ಮಾಣದಲ್ಲಿ ಸಹಕರಿಸಲು ಸ್ಕೌಟ್ ಪ್ರತಿಜ್ಞೆ ಮತ್ತು ನಿಯಮವನ್ನು ಆಧರಿಸಿದ, ಮೌಲ್ಯಾಧಾರಿತ ವ್ಯವಸ್ಥೆಯ ಮೂಲಕ ಯುವ ಜನತೆಯ ಶಿಕ್ಷಣಕ್ಕೆ ಕೊಡುಗೆ ನೀಡುವುದೇ ಸ್ಕೌಟಿಂಗ್ ಧ್ಯೇಯ''

ಈ ಧ್ಯೇಯ ನಿರೂಪಣೆಯನ್ನು ವಿಶ್ವ ಸ್ಕೌಟ್ ಸಂಸ್ಥೆಯು ತನ್ನ ಎಲ್ಲಾ ಸದಸ್ಯ ರಾಷ್ಟ್ರಗಳಿಗೆ ಕಳುಹಿಸುತ್ತಾ, ಇದರ ಪರಿಪೂರ್ಣತೆಗಾಗಿ ತಮ್ಮದೇ ಆದ ಕ್ರಿಯಾ ಯೋಜನೆ, ಕಾಲಮಿತಿ, ಮುಂತಾದವುಗಳನ್ನು ರೂಪಿಸಿಕೊಳ್ಳಲು ಸೂಚಿಸಲಾಗಿತ್ತು. ಈ ನಿಟ್ಟಿನಲ್ಲಿ ಕಾರ್ಯ ಪ್ರವೃತ್ತರಾದ ರಾಷ್ಟ್ರೀಯ ಸಂಸ್ಥೆಯವರು ಅನೇಕ ಹಿರಿಯ ನಾಯಕರುಗಳ, ತಜ್ಞರ ಸಭೆಯಲ್ಲಿ ಈ ಬಗ್ಗೆ ಕೂಲಂಕುಷವಾಗಿ ಚರ್ಚಿಸಿದರು. ಅದರ ಫಲವೇ ಈ ಲೇಖನದ ಆರಂಭದಲ್ಲಿ ಕಂಡು ಬಂದ ನಿರೂಪಣೆ.

2003ರ ರಾಷ್ಟ್ರೀಯ ಕಾರ್ಯಕಾರಿ ಸಭೆಯಲ್ಲಿ ಅಂಗೀಕರಿಸಲ್ಪಟ್ಟ ಈ ನಿರೂಪಣೆಯು 10 ವರ್ಷಗಳಲ್ಲಿ ಸಂಸ್ಥೆಯ ಪ್ರಗತಿಯ ಒಂದು ಮುನ್ನೋಟವನ್ನು ನೀಡುತ್ತದೆ.

ಈ ನಿರೂಪಣೆಯಲ್ಲಿ 5 ಪ್ರಮುಖ ಅಂಶಗಳಿವೆ.

1. ಸ್ವಾವಲಂಬಿ
2. ಮೌಲ್ಯಾಧಾರಿತ
3. ಗುಣ ನಿರ್ದೇಶಕ
4. ಉತ್ತಮ ಆಡಳಿತ ವ್ಯವಸ್ಥೆ
5. ಸವಾಲಿನಿಂದ ಕೂಡಿದ, ನವೀನಯುತ ಕಾರ್ಯಕ್ರಮಗಳು.

ಈ ಪಂಚ ಆಯಾಮಗಳಲ್ಲಿ ಪ್ರಗತಿಯನ್ನು ಕಾಣಬೇಕೆಂಬುದು ರಾಷ್ಟ್ರೀಯ ಸಂಸ್ಥೆಯ ಹಿರಿದಾಸೆಯಾಗಿದೆ. ಆ ಹಿರಿದಾಸೆಯನ್ನು ನನಸಾಗಿಸಲು ಎಲ್ಲಾ ಹಂತದಲ್ಲಿಯೂ (ರಾಜ್ಯ, ಜಿಲ್ಲೆ, ಸ್ಥಳೀಯ, ಘಟಕ) ಎಲ್ಲರೂ (ಆಯುಕ್ತರುಗಳು, ಪದಾಧಿಕಾರಿಗಳು, ತರಬೇತಿದಾರರು, ಘಟಕ ನಾಯಕರು, ಫಲಾನುಭವಿಗಳಾದ ಯುವಕರು) ಕಾರ್ಯಪ್ರವೃತ್ತರಾಗಬೇಕಿದೆ.

ಈ ಪ್ರಗತಿಯನ್ನು ಸಾಧಿಸಲು ನಮಗಿರುವ ಪ್ರಾಬಲ್ಯಗಳು, ದೌರ್ಬಲ್ಯಗಳು, ಅವಕಾಶಗಳು ಮತ್ತು ತಡೆಗಳನ್ನು ವಿಶ್ಲೇಷಿಸಲಾಗಿದೆ.

ಇದರ ಹಿನ್ನೆಲೆಯಲ್ಲಿ ಪ್ರಮುಖವಾಗಿ ಗಮನಿಸಬೇಕಾದ ಕೆಲವು ಆಯಕಟ್ಟಿನ ಅಂಶಗಳನ್ನು ಆದ್ಯತೆ ಮೇಲೆ ಪಟ್ಟಿಮಾಡಲಾಗಿದೆ.

*ಅವುಗಳೆಂದರೆ :*

<u>1. ಯುವ ಕಾರ್ಯಕ್ರಮ :</u> ಯುವಕರಿಗಾಗಿ ನವೀನ ಹಾಗೂ ಸವಾಲಿನ ಕಾರ್ಯಕ್ರಮಗಳನ್ನು ರೂಪಿಸುವುದು.(ಎಪಿಆರ್‌ಓದಲ್ಲಿ ಸೂಕ್ತ ಬದಲಾವಣೆಗಳು)

<u>2. ಬೆಳವಣಿಗೆ :</u> ಸದಸ್ಯತ್ವವನ್ನು ಸಮಗ್ರವಾಗಿ ಶೇ 10ರಷ್ಟು ಹೆಚ್ಚಿಸುವುದು. (ಸ್ಕೌಟಿಂಗ್ ತಲುಪದೇ ಇರುವ ಕ್ಷೇತ್ರಗಳಿಗೆ ಇದನ್ನು ತಲುಪಿಸುವುದು)

3. ಹಣಕಾಸು : ಹಣಕಾಸಿನ ಪರಿಸ್ಥಿತಿಯನ್ನು ಸುಧಾರಿಸುವುದು (ಹಾಲಿ ಇರುವ ಸಂಪನ್ಮೂಲಗಳನ್ನು ಗರಿಷ್ಠ ಮಟ್ಟದಲ್ಲಿ ಬಳಸಿಕೊಳ್ಳುವುದು.)

<u>4. ವಯಸ್ಕ ಸಂಪನ್ಮೂಲ :</u> ವಯಸ್ಕ ನಾಯಕರ ಸಾಮರ್ಥ್ಯಗಳನ್ನು ಸುಧಾರಿಸುವುದು.

<u>5. ನಿರ್ವಹಣೆ :</u> ಸಂಸ್ಥೆಯ ಸಮಗ್ರವಾದ ನಿರ್ವಹಣೆಯನ್ನು ಸುಧಾರಿಸುವುದು.

<u>6. ಸಂವಹನ ಮತ್ತು ಸಾರ್ವಜನಿಕ ಸಂಪರ್ಕ :</u> ಆಂತರಿಕವಾಗಿ ಮತ್ತು ಬಾಹ್ಯವಾಗಿ ಸಂವಹನ ಹಾಗೂ ಸಾರ್ವಜನಿಕ ಸಂಪರ್ಕ ಸಾಧಿಸುವುದು.

ಈ ಆದ್ಯತೆಗಳ ಆಧಾರದ ಮೇಲೆ ಒಂದು ಕ್ರಿಯಾ ಯೋಜನೆಯನ್ನು ಸಿದ್ದಗೊಳಿಸಲಾಗಿದೆ. ಇದರಡಿಯಲ್ಲಿ ಪ್ರತಿಯೊಂದು ಆದ್ಯತೆಗಳಿಗೆ ಪ್ರಮುಖವಾಗಿರುವ 2 ಅಥವಾ 3 ಉದ್ದೇಶಗಳನ್ನು ನಿರೂಪಿಸಲಾಗಿದೆ.

ಈ ಉದ್ದೇಶಗಳನ್ನು ಈಡೇರಿಸುವಲ್ಲಿ ಕೆಲವು ಅಂಶಗಳನ್ನು ಸಹ ಗುರುತಿಸಲಾಗಿದೆ.

★ ನಿರ್ವಹಿಸಬೇಕಾದ ಕಾರ್ಯ
★ ಅವಧಿ
★ ಹೊಣೆ (ರಾಷ್ಟ್ರೀಯ ಸಂಸ್ಥೆ, ರಾಜ್ಯ ಸಂಸ್ಥೆ ಜಿಲ್ಲಾ ಸಂಸ್ಥೆ, ಸ್ಥಳೀಯ ಸಂಸ್ಥೆ ಇತ್ಯಾದಿ)
★ ದೊರಕುವ ಸಂಪನ್ಮೂಲಗಳು.

ಇದರ ಪ್ರಗತಿಯನ್ನು ಪರಿಶೀಲಿಸಿ ಸೂಕ್ತ ಮಾರ್ಗದರ್ಶನ ನೀಡಲು ರಾಷ್ಟ್ರ ಮಟ್ಟದಲ್ಲಿ, ರಾಜ್ಯ ಮಟ್ಟದಲ್ಲಿ ಕ್ರಿಯಾ ಸಮಿತಿಗಳನ್ನು ರಚಿಸಲಾಗಿದೆ.

ಈ ಕಾರ್ಯ ಈಗ ಜಿಲ್ಲಾ ಮಟ್ಟದಲ್ಲಿ ಆಗಬೇಕಾಗಿದೆ. ತಮ್ಮ ಸ್ಥಳೀಯ ಪರಿಸ್ಥಿತಿಗೆ ಅನುಗುಣವಾಗಿ ಆದ್ಯತೆಗಳನ್ನು ಪುನರ್ ವ್ಯವಸ್ಥೆಗೊಳಿಸಿಕೊಂಡು ಸೂಕ್ತವಾದ ಕ್ರಿಯಾ ಯೋಜನೆ ಹಾಕಿಕೊಂಡು ಕಾರ್ಯ ಪ್ರವೃತ್ತರಾಗಬೇಕು. ಹಾಗೆ ಮಾಡಲು ದೊರಕುವ ಸಂಪನ್ಮೂಲಗಳನ್ನು ಗುರುತಿಸಿಕೊಳ್ಳಬೇಕು, ಅದನ್ನು ಪೂರೈಸಲು ನಿರ್ದಿಷ್ಟ ಅವಧಿಯನ್ನು ನಿಗಧಿಪಡಿಸಿಕೊಳ್ಳಬೇಕು.

ರಾಷ್ಟ್ರೀಯ ಸಂಸ್ಥೆಯವರು ಕಂಡುಕೊಂಡಿರುವ ''ದರ್ಶನ 2013''ನ್ನು ಸಾಕಾರಗೊಳಿಸಬೇಕಾದದ್ದು ನಮ್ಮೆಲ್ಲರ ಕರ್ತವ್ಯ ಹಾಗೂ ಬದ್ಧತೆ, ಅದಕ್ಕಾಗಿ ಪ್ರತಿಯೊಬ್ಬರೂ, ಪ್ರತಿ ಹಂತದಲ್ಲೂ ಶ್ರಮಿಸಬೇಕಾಗಿದೆ. ●

ಉತ್ತಮ ಮಟ್ಟದಲ್ಲಿ ಕೆಲಸಮಾಡಲು, ತುಸು ಉತ್ಸಾಹದ ಮನಸ್ಸಿರಬೇಕು – ಎಡಿಸನ್.



# ಸಕಲ ಜೀವರಾಶಿಗಳ ಸೃಷ್ಟಿಕರ್ತ ಓಜೋನ್ ಪದರ

ಡಾ: ಕೆ.ಎಂ.ರಾಜು
ಸಹಾಯಕ ಪರಿಸರ ಅಧಿಕಾರಿಗಳು
ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ
ದಾವಣಗೆರೆ.

ಸೌರಮಂಡಲದಲ್ಲಿ ಸೂರ್ಯನೇ ಅಧಿಪತಿ. ಸೂರ್ಯನಿಂದಲೇ ಸಕಲ ಜೀವರಾಶಿಗಳ ಸಂತೃಪ್ತ ಜೀವನ. ಆ ಸೂರ್ಯನ ಒಂದು ತುಂಡು ಸಿಡಿದು ಭೂಮಿಯಾಗಿದೆ. ಹಲವು ಕೋಟಿ ವರ್ಷಗಳ ನಂತರ ಭೂಮಿಯ ಮೇಲ್ಪದರು ತಣ್ಣಗಾಗುತ್ತಾ ಬರುತ್ತಿರುವಾಗ, ವಾತಾವರಣದಲ್ಲಿ ಆದ ಭೌತಿಕ ಬದಲಾವಣೆಯ ಕ್ರಿಯೆಯಿಂದಾಗಿ ಓಜೋನ್ ಪದರವು ಉತ್ಪತ್ತಿಯಾಯಿತು. ಓಜೋನ್ ಪದರದ ಸೃಷ್ಟಿಯ ನಂತರ, ಓಜೋನ್ ಪದರವು ಸೂರ್ಯನಿಂದ ಬರುವ ನೇರಳಾತೀತ (Ultra Violet Rays) ಕಿರಣಗಳನ್ನು ತಡೆಹಿಡಿಯಲು ಪ್ರಾರಂಭಿಸಿತು. ತದನಂತರ ಏಕಕೋಶ ಜೀವಿಗಳು ಅಂದರೆ, ಜೀವಿಗಳು ಮೊಟ್ಟ ಮೊದಲ ಬಾರಿಗೆ ಈ ಭೂಮಿಯ ಮೇಲೆ ಉಗಮವಾದವು. ನಂತರ ಬಹುಕೋಶ ಜೀವಿಗಳಾದ ಸಸ್ಯಗಳು, ಪ್ರಾಣಿಗಳು ಒಟ್ಟಾರೆ ಜೀವ ಸಂಕುಲವು ಉಗಮವಾಗಿ ತಮ್ಮದೇ ಆದ ವಿಕಾಸ ಹೊಂದುತ್ತಾ ಬಂದಿದೆ. ಈ ವಿಕಾಸದಲ್ಲಿ ಮಾನವನು ಸಹ ಒಬ್ಬ ಮಾನವ ಜೀವಿ ಸುಮ್ಮನೆ ಕುಳಿತುಕೊಳ್ಳುವ ಸಾಮಾನ್ಯ ಜೀವಿಯಲ್ಲ. ಅವನಿಗೆ ಬಹಳ ಆಸೆಗಳಿವೆ, ಆಕಾಂಕ್ಷೆಗಳಿವೆ. ಪರಿಸರದಲ್ಲಿರುವ ಪ್ರತಿಯೊಂದು ಸಂಪತ್ತನ್ನು ಉಪಯೋಗಿಸಿಕೊಂಡು ಸುಖ, ಸಂತೋಷ, ಆನಂದದ ಜೀವನ ಸಾಗಿಸಬೇಕೆಂಬುದೇ ಅವನ ಮೂಲ ಉದ್ದೇಶವಾಗಿದೆ. ಇದರಿಂದಾಗಿಯೇ ಕೈಗಾರಿಕೀಕರಣ(Industrialization) ನಗರೀಕರಣ (Urbanization) ಹಾಗೂ ಆಧುನೀಕರಣದ (Modernization)ಭರಾಟೆ. ಪರಿಸರ ಮಾಲಿನ್ಯಕ್ಕೆ ಕಾರಣವಾಗಿದೆ. ಅವನ ಆಸೆಗಳಿಗೆ ಇತಿಮಿತಿ ಇಲ್ಲದೇ ಪರಿಸರ ವಿನಾಶದ ಅಂಚಿನಲ್ಲಿರುವುದು ಸದ್ಯದ ಬಹುಮುಖ್ಯ ವಿಚಾರವಾಗಿದೆ.

ನಾವು ಪುರಾಣ, ಇತಿಹಾಸದಲ್ಲಿ ಓದಿ ತಿಳಿದಿರುವಂತೆ ಸಕಲ ಜೀವಿಗಳ ಸೃಷ್ಟಿಕರ್ತ ಬ್ರಹ್ಮದೇವರೆಂದು, ಆದರೆ ವೈಜ್ಞಾನಿಕವಾಗಿ ತಿಳಿದಾಗ ಅರಿವಾಗುವುದು ಓಜೋನ್ ಪದರವು ಭೂಮಿಯ ವಾತಾವರಣದಲ್ಲಿ ಆವರಿಸಿದ ನಂತರ ಸಕಲ ಜೀವಿಗಳು ಒಂದೊಂದಾಗಿ ಉಗಮವಾಗಿವೆ. ಹಾಗಾದರೆ ಆ ಸೃಷ್ಟಿಕರ್ತ ಓಜೋನ್ ಪದರದ ಬಗ್ಗೆ ತಿಳಿದುಕೊಳ್ಳೋಣ.

ಭೂಮಿಯ ಮೇಲ್ಮೈಯಿಂದ ಸುಮಾರು 10ರಿಂದ 50ಕಿ.ಮೀ.ಗಳ ಮಧ್ಯೆ ಓಜೋನ್ ಪರಮಾಣುಗಳ ಪದರವಿದೆ. ಓಜೋನ್ ಪದರವು ಸುಮಾರು 24 ಕಿ.ಮೀ.ನಷ್ಟು ದಪ್ಪವಿದೆ. ಓಜೋನ್ ಮಾಲಿಕ್ಯೂಲಿನಲ್ಲಿ ಆಮ್ಲಜನಕದ ಮೂರು ($O_3$) ಅಣುಗಳಿರುತ್ತವೆ. ಸೂರ್ಯನಿಂದ ಹೊರಬರುವ ಅಲ್ಟ್ರಾವಯೋಲೆಟ್ ಕಿರಣಗಳನ್ನು ಓಜೋನ್ ಹೀರುತ್ತದೆ.

ಈ ಬಿಸಿ ಓಜೋನ್ ಪದರವು ಸೂರ್ಯನ ನೇರಳಾತೀತ (Ultra Violet Rays) ಕಿರಣಗಳಿಂದ ನಮ್ಮನ್ನು ರಕ್ಷಿಸುತ್ತದೆ. ಆದ್ದರಿಂದ ಇದು ಭೂಮಿಯಲ್ಲಿರು ಎಲ್ಲಾ ಜೀವಿಗಳಿಗೆ ಅಗತ್ಯವಾಗಿದೆ. ಈ ಜೀವರಕ್ಷಕ ಓಜೋನ್ ಪದರವು ಭೂಮಿಯ ಮೇಲ್ಮೈಯಿಂದ ಹೊರಬರುವ ಕೆಲವು ಹಾನಿಕಾರಕ ಅಣುಗಳಿಂದ ನಾಶವಾಗುತ್ತಿರುವುದನ್ನು ವಿಜ್ಞಾನಿಗಳು ಕಂಡು ಹಿಡಿದಿರುತ್ತಾರೆ. ಇದನ್ನು ಓಜೋನ್ ಪದರ ಕಡಿಮೆಯಾಗುವುದೆಂದು (Ozone depletion) ಕರೆಯುತ್ತಾರೆ. ಓಜೋನ್ ಪದರವು ನೇರಳಾತೀತ ಕಿರಣಗಳನ್ನು ಹೀರಿಕೊಳ್ಳದಿದ್ದರೆ, ಮನುಷ್ಯನ ಆರೋಗ್ಯ, ಮರಗಿಡಗಳು, ಜಲಚರ ಜೀವಿಗಳು ಹಾಗೂ ನೈಸರ್ಗಿಕ ಚಕ್ರಗಳ ಮೇಲೆ ಕೆಟ್ಟ ಪರಿಣಾಮಗಳನ್ನು ಬೀರುತ್ತವೆ. ಈ ಓಜೋನ್ ನಾಶವು ಧೃವ ಪ್ರದೇಶದಲ್ಲಿ ಹೆಚ್ಚಾಗಿರುತ್ತದೆ. ಈ ಕ್ರಿಯೆಯು ಬಹಳ ಕಾಲದಿಂದಲೂ ನಡೆಯುತ್ತಿದ್ದು ಇದನ್ನು 1973ರಲ್ಲಿ ಅಮೇರಿಕಾದ ವಿಜ್ಞಾನಿಗಳಾದ ಡಾ: ಶೆರಿ ರೋಲ್ಯಾಂಟ್ ಮತ್ತು ಡಾ: ಮೆರಿಯೋ ಮೊಲಿನಾ ಇವರು ಕಂಡು ಹಿಡಿದಿರುತ್ತಾರೆ.

ಓಜೋನ್ ಹೆಚ್ಚು ಪ್ರತಿಕ್ರಿಯೆಯ ಅನಿಲವಾಗಿದೆ. ಓಜೋನ್ ಪದರದ ನಾಶಕ್ಕೆ ಮಾನವನು ನಡೆಸುತ್ತಿರುವ ಕಾರ್ಯಚಟುವಟಿಕೆಗಳೇ ಕಾರಣವಾಗಿವೆ. ಶೀತಕ ಯಂತ್ರ (Refrigerators), ಹವಾನಿಯಂತ್ರಣಾ ಉಪಕರಣ (Air Conditioner), ಪ್ಲಾಸ್ಟಿಕ್ ಫೋಮ್, ಬೆಂಕಿ ಆರಿಸುವ ಯಂತ್ರಗಳು(Fire extinguisher), ಕ್ರಿಮಿನಾಶಕಗಳು (Insecticides) ಏರೋಸಾಲ್ ಸ್ಪ್ರೇಕ್ಯಾನ್‌ಗಳು ಹಾಗೂ ಇತರೆ ಸಿ.ಎಫ್.ಸಿ(Chloro fluorocarbon) , ಏರೋಸಾಲ್ ನಂತಹ (Carbons) ಹೈಡ್ರೋ ಕ್ಲೋರೋ ಫ್ಲೋರೋ ಕಾರ್ಬನ್‌ಗಳು (Hydro Chloro fluro carbons), ಹ್ಯಾಲನ್‌ಗಳು(Halons) ಮಿಥೈಲ್ ಕ್ಲೋರೋಫಾರ್ಮ (Mythyl Chloroform) ಮತ್ತು ಮಿಥೈಲ್ ಬ್ರೋಮೈಡ್(Mythyl Bromide) ಇವುಗಳಿಂದ ತಯಾರಿಸಲ್ಪಟ್ಟ ಅಥವಾ ಇಂತ ವಸ್ತುಗಳಿಂದ ಓಜೋನ್ ಪದರ ಕ್ಷೀಣವಾಗುವುದಕ್ಕೆ ಕಾರಣವಾದ ರಾಸಾಯನಿಕ ವಸ್ತುಗಳನ್ನು ಹೊಂದಿರುವ ವಸ್ತುಗಳು, ಸಿದ್ಧವಸ್ತುಗಳು ಓಜೋನ್ ಪದರವು ಕ್ಷೀಣವಾಗುವುದಕ್ಕೆ ಕಾರಣವಾಗಿದೆ. ಓಜೋನ್ ಪದರದ ರಕ್ಷಣೆಗೆ ಪ್ರತಿಯೊಬ್ಬರೂ ತೆಗೆದುಕೊಳ್ಳಬೇಕಾದ ಕ್ರಮಗಳನ್ನು ಕೆಳಗಿನಂತೆ ವಿವರಿಸಬಹುದು.

'ಓಜೋನ್ ಮಿತ್ರ' ಅಥವಾ 'ಕ್ಲೋರೋ ಫ್ಲೋರೋ ಕಾರ್ಬನ್ ಮುಕ್ತ' ಎಂದು ಗುರುತು ಪಟ್ಟಿ ಹೊಂದಿರುವ ಸಿದ್ಧ ವಸ್ತುಗಳನ್ನು ಕೊಳ್ಳಬೇಕು.

ಹಳೆಯ ರೆಫ್ರಿಜರೇಟರ್‌ಗಳನ್ನು (Refrigerator) ಜವಾಬ್ದಾರಿಯುತವಾಗಿ ವಿಲೇವಾರಿ ಮಾಡಿರಿ. ವಿಲೇವಾರಿ ಮಾಡುವ ಮೊದಲು ಶೀತಕ ಯಂತ್ರದಿಂದ ಕ್ಲೋರೋ ಫ್ಲೋರೋ ಕಾರ್ಬನ್ ಮತ್ತು ಹೈಡ್ರೋಕ್ಲೋರೋ ಫ್ಲೋರೋ ಕಾರ್ಬನ್‌ಗಳನ್ನು ಹೊರತೆಗೆಯಬೇಕು.

ಹ್ಯಾಲನ್‌ಯುಕ್ತ ಸಾಗಿಸುವ, ಸಣ್ಣಬೆಂಕಿ ಆರಿಸುವ ಸಾಧನಗಳನ್ನು ಪುನರ್‌ಬಳಕೆಗಾಗಿ, ಬೆಂಕಿ ತಡೆಗಟ್ಟುವ ಪ್ರಾಧಿಕಾರಕ್ಕೆ ಹಿಂದಿರುಗಿಸಬೇಕು. ಮಿಥೈಲ್ ಬ್ರೋಮೈಡ್‌ನಂತಹ ಓಜೋನ್ ನಾಶ ಮಾಡುವ ಕ್ರಿಮಿನಾಶಗಳ

ವಿಚಾರದ ದೀಪ ನಂದಿದಾಗ, ಆಚಾರವು ಕುರುಡಾಗುತ್ತದೆ - ವಿನೋಬಾ.

ಬದಲಾಗಿ ಸಂಕೀರ್ಣ ಕ್ರಿಮಿ ನಿರ್ವಹಣೆ ಮತ್ತು ಪದರವನ್ನು ಕ್ಷೀಣಗೊಳಿಸುವ ವಸ್ತುಗಳಿಂದ ಮುಕ್ತವಾದ ವಸ್ತುಗಳನ್ನು ಉಪಯೋಗಿಸಲು ಯೋಚಿಸಬೇಕು. ಹವಾ ನಿಯಂತ್ರಣ ಉಪಕರಣದಿಂದ, ಶೀತಕ ಯಂತ್ರಗಳಿಂದ ಹೊರತೆಗೆದ ಶೀತೀಕರಣ ವಸ್ತುವನ್ನು ವಾತಾವರಣಕ್ಕೆ ಹೊರಹಾಕದಿರುವುದನ್ನು ಖಾತ್ರಿಪಡಿಸಿಕೊಳ್ಳಬೇಕು. ಸತತ ತಪಾಸಣೆ ಮತ್ತು ರಂಧ್ರಗಳನ್ನು ಮುಚ್ಚುವ ಮೂಲಕ ಅವುಗಳಿಂದುಂಟಾಗುವ ತೊಂದರೆಯನ್ನು ತಪ್ಪಿಸಿರಿ. ಓಜೋನ್ ಕ್ಷೀಣಗೊಳಿಸುವ ವಸ್ತುಗಳ ಬಳಕೆಯನ್ನು ಉದ್ದಿಮೆಗಳಲ್ಲಿ ಮತ್ತು ತಯಾರಿಕೆಯ ವಿಧಾನಗಳಲ್ಲಿ ಬದಲಾಯಿಸಿಬೇಕು.

ವಿದ್ಯಾರ್ಥಿಗಳಿಗೆ ಪರಿಸರ ಕಾಪಾಡುವಿಕೆಯ ಬಗ್ಗೆ ಅದರಲ್ಲೂ ಮುಖ್ಯವಾಗಿ ಓಜೋನ್ ಪದರದ ರಕ್ಷಣೆಯ ಪ್ರಾಮುಖ್ಯತೆಯನ್ನು ತಿಳಿಸಬೇಕು. ಓಜೋನ್‌ಗಳನ್ನು ಕ್ಷೀಣಗೊಳಿಸುವ ವಸ್ತುಗಳಿಂದ ನಮ್ಮ ವಾತಾವರಣಕ್ಕೆ ಆಗುವ ಪರಿಣಾಮವನ್ನು ಮತ್ತು ಈ ಸಮಸ್ಯೆಯನ್ನು ಬಗೆಹರಿಸಲು ಹಲವು ರಾಷ್ಟ್ರಗಳು ಓಜೋನ್ ಪದರವನ್ನು ಕ್ಷೀಣಗೊಳಿಸುವ ಶಕ್ತಿಯಿಲ್ಲದ ಇತರ ಉತ್ಪನ್ನಗಳ ತಯಾರಿಕೆಯನ್ನು ಅಳವಡಿಸಿಕೊಳ್ಳುತ್ತಿವೆ.

ಅಮೆರಿಕಾ ದೇಶದ ಪರಿಸರ ಯೋಜನೆ(UNEP)ಅಡಿಯಲ್ಲಿ ಮಲ್ಟಿಲ್ಯಾಟರಲ್(MLF)ನಿಧಿ ಓಜೋನ್ ಪದರಕ್ಕೆ ಹಾನಿ ಮಾಡುವ ವಸ್ತುಗಳನ್ನು ಬಳಸುವ ತಂತ್ರಜ್ಞಾನವನ್ನು ಉಪಯೋಗಿಸಲು ನಿಧಿಗಳನ್ನು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಕೆಲವು ತತ್ವಗಳ ಆಧಾರದ ಮೇಲೆ ತೆಗೆದಿಡಲಾಗಿದೆ.

ಏರೋಸಾಲ್, ಫೋಮ್, ಶೀತೀಕರಣ, ಹವಾನಿಯಂತ್ರಿತ, ಹ್ಯಾಲನ್ ಮತ್ತು ದ್ರಾವಣ ವಿಭಾಗಗಳಲ್ಲಿ ಭಾರತದ ಸುಮಾರು 200ಕ್ಕೂ ಹೆಚ್ಚು ಉದ್ದಿಮೆಗಳು ಓಜೋನ್ ಪದರ ನಾಶ ಮಾಡದಂತಹ ತಂತ್ರಜ್ಞಾನವನ್ನು ಅಳವಡಿಸಿಕೊಳ್ಳಲು ಅಮೆರಿಕಾದ 'ಮಲ್ಟಿ ಲ್ಯಾಟಕಲ್ ನಿಧಿ'ಯಿಂದ ಅಂದಾಜು 55 ಮಿಲಿಯನ್ ಯು.ಎಸ್. ಡಾಲರುಗಳಷ್ಟು ಹಣವನ್ನು ಪಡಿದಿವೆ.

ಸುಮಾರು 75 ಉದ್ದಿಮೆಗಳು ಸಾಂಪ್ರದಾಯಿಕವಾಗಿ ಲಭ್ಯವಿರುವ ಓಜೋನ್ ಕ್ಷೀಣತೆಗೆ ಕಾರಣವಲ್ಲದ ವಸ್ತುಗಳು,ತಂತ್ರಜ್ಞಾನವನ್ನು ಯಶಸ್ವಿಯಾಗಿ ಅಳವಡಿಸಿಕೊಂಡಿವೆ.

25-7-1995ರ ನಂತರ ಸ್ಥಾಪಿಸಿದ ಉದ್ದಿಮೆಗಳು ಮಲ್ಟಿಲ್ಯಾಟರಲ್ ನಿಧಿಯಿಂದ ಹಣ ಪಡೆಯಲು ಅರ್ಹವಾಗಿಲ್ಲ . 25-7-1995ಕ್ಕೂ ಮೊದಲು ಸ್ಥಾಪಿಸಿದ ಉದ್ದಿಮೆಗಳು ಮಾಂಟ್ರಿಯಲ್ ಪ್ರೊಟೋಕಾಲ್‌ಗೆ ಭಾರತದ ಬದ್ಧತೆಯನ್ನು ತೋರಿಸಲು ಕೂಡಲೇ ಮುಂದೆ ಬರಬೇಕು ಹಾಗೂ ನಿಧಿಯ ಹಣವನ್ನು ಕೋರಬೇಕು.

ಈ ಮೇಲಿನ ಒಪ್ಪಂದಕ್ಕೆ ಭಾರತವು ಸಹಿ ಹಾಕಿದ್ದು ಸರಿ ಎಂದೆನಿಸುತ್ತದೆ. ಏಕೆಂದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಪರಿಸರವನ್ನು ಕಾಪಾಡಿಕೊಳ್ಳುವುದು ಬಹುಮುಖ್ಯವಾಗಿದೆ. ಒಂದು ದೇಶದ ಪ್ರಗತಿಗಿಂತ ಮುಖ್ಯವಾಗಿ ಜೀವ ಸಂಕುಲದ ಉಳಿವು ಮುಖ್ಯವಾಗಿರುವುದರಿಂದ, ಭಾರತವು ಮಾಂಟ್ರಿಯಲ್ ಪ್ರೋಟೋಕಾಲ್‌ಗೆ ಸಹಿ ಹಾಕಿ ತನ್ನ ಪರಿಸರ ಪ್ರೇಮವನ್ನು ಹೆಚ್ಚಿಸಿಕೊಂಡಿದೆ. ಈ ನಿಟ್ಟಿನಲ್ಲಿ ಎಲ್ಲಾ ದೇಶಗಳು ಒಂದಾಗಿ ಸಹಿ ಹಾಕಬೇಕಿದೆ. ನಮ್ಮ ನೆಲ, ಜಲ, ವಾಯುವನ್ನು ಉಳಿಸಿಕೊಂಡು ಮನುಕುಲದ ಉಳಿವನ್ನು ಈ ಭೂಮಿಯ ಮೇಲೆ ನಿರಂತರವಾಗಿರಿಸಬೇಕಿದೆ.

ಓಜೋನ್ ಪದರದ ನಾಶದಿಂದಾಗಿ, ಮಾನವನ ಕಣ್ಣುಗಳು ಕಾಣದಂತಾಗಬಹುದು. ಜಲಚರ ಸಸ್ಯ ಹಾಗೂ ಪ್ರಾಣಿಗಳ ಮೇಲೆ ಪರಿಣಾಮ ಬೀರಿ ಆಹಾರ ಸರಪಳಿಯಲ್ಲಿ ಏರುಪೇರಾಗುತ್ತದೆ. ತತ್ಪರಿಣಾಮವಾಗಿ ಸಕಲ ಜೀವರಾಶಿಗಳು ನಾಶವಾಗುತ್ತವೆ. ಮುಂದೊಂದು ದಿನ ಈ ಭೂಮಿಯಲ್ಲಿ ಜೀವಿಗಳಿಲ್ಲದ ನಿರ್ಜೀವಗಳ ವಾತಾವರಣ ವಾಗುತ್ತದೆ. ಸೂರ್ಯನ ಸುತ್ತ ಇರುವ ಬೇರೆ ಗ್ರಹಗಳಂತೆ ಭವಿಷ್ಯದಲ್ಲಿ ಮಾನವನ ಬದುಕು ದುರಂತವಾಗಲಿದೆ. ಮಾನವನು ಎಚ್ಚೆತ್ತುಕೊಳ್ಳದಿದ್ದಲ್ಲಿ ಈ ಪರಿಸರ ವಿನಾಶ ಜೊತೆ ಅವನ ಅವನತಿಯೂ ಇದೆ. ಮಾನವನ ಚಟುವಟಿಕೆಗಳನ್ನು ನಿಗ್ರಹಿಸಲು ಪರಿಸರವೇ ಅವನಿಗೆ ಪಾಠವನ್ನು ಕಲಿಸಹತ್ತಿದೆ. ಮಾನವ ಪರಿಸರಕ್ಕೆ ಹೊಂದಿಕೊಳ್ಳಬೇಕೇ ವಿನಹ ಪರಿಸರ ಅವನಿಗೆ ಹೊಂದಿಕೊಳ್ಳುವುದಿಲ್ಲ. ಅದು ಅವನನ್ನು ಪ್ರತಿ ಕ್ಷಣದಲ್ಲೂ ನಿಯಂತ್ರಿಸುತ್ತಿದೆ. ಅದನ್ನೇ ನಾವು ಪವಾಡ ಎನ್ನುತ್ತೇವೆ. ಅದುವೇ ಪರಿಸರದಲ್ಲಿ ಅಂದರೆ ನಿಸರ್ಗದಲ್ಲಿ ಅಡಗಿರುವ ನಿಗೂಢತೆ. ಆ ನಿಗೂಢತೆಯನ್ನು ಬೇಧಿಸುವುದು ಮಾನವನಿಂದ ಅಸಾಧ್ಯವಾದ ಮಾತು. ಅದೇನಿದ್ದರೂ ಅವನ ಕಲ್ಪನೆ , ಅವನ ಮಟ್ಟಿನ ಬುದ್ಧಿಮತ್ತೆ ಮಾತ್ರ ಆಗಿರುತ್ತದೆ. ಅರ್ಥವೇ ಆಗದ ಈ ಪರಿಸರದಲ್ಲಿ ಹೆಚ್ಚಿನ ದುರಾಸೆಗಳನ್ನು ಬಿಟ್ಟು ಬರಿ ಆಸೆಗಳನ್ನು ಈಡೇರಿಸಿಕೊಳ್ಳುವ ನಿಟ್ಟಿನಲ್ಲಿ ಮಾನವ ಚಿಂತಿಸಿದರೆ ಅವನು ಸ್ವಲ್ಪಕಾಲ ತನ್ನ ಅಧಿಪತ್ಯವನ್ನು ಈ ಭೂಮಿಯಲ್ಲಿ ಮುಂದುವರಿಸಲು ಸಾಧ್ಯ ಇಲ್ಲದಿದ್ದರೆ.....?

## ರಜತ ದೀಪ

ಹಚ್ಚೇವು ನಾವು ಹೊನ್ನ ಕನ್ನಡದ ದೀಪ<br>
ಬೆಳಗೇವು ಸ್ಕೌಟ್-ಗೈಡ್ ಮೇಳದ ರಜತ ದೀಪ

ಹಚ್ಚೇವು ನಾವು ಜನ ಮನದ ಸ್ನೇಹದೀಪ<br>
ದಾವಣಗೆರೆಯ ಸಿರಿ ನೆಲದಲಿ ರಜತ ದೀಪ<br>
ಬೆಳಗೇವು ನಾವು ಸ್ಕೌಟ್-ಗೈಡ್ ನಿಷ್ಠೆಯ ದೀಪ

ಹಚ್ಚೇವು ನಾವು ಜನಮನದಿ ಭ್ರಾತೃದೀಪ<br>
ಶಾಂತಿಯನು ಸಾರುವ ರಜತ ದೀಪ<br>
ಬೆಳಗೇವು ನಾವು ವಿಶ್ವಶಾಂತಿಯ ದೀಪ

ಎಸ್.ಕೆ.ಪ್ರಭಾ<br>
ಎಲ್.ಟಿ.(ಗೈ)<br>
ಬೆಂಗಳೂರು

ಎಲ್ಲರ ಸುಖವನ್ನು ಬಯಸುವುದೇ ದಯೆ - ಮಹಾಭಾರತ.



# ಸ್ಕೌಟ್-ಗೈಡ್ ಸೂಕ್ತ ಶಿಸ್ತು ಬದ್ಧ ಜೀವನಕ್ಕೆ ದಾರಿ ದೀಪ

ಸಿ.ಆರ್. ಮರುಳಪ್ಪ, ಎಂ.ಎ.
ಕಾರ್ಯದರ್ಶಿಗಳು,
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್
ದಕ್ಷಿಣ ವಲಯ, ದಾವಣಗೆರೆ.

ಸ್ಕೌಟ್ ಶಿಸ್ತುಳ್ಳವನು, ಸಮಯ ಪರಿಪಾಲಕ, ಮಿತವ್ಯಯಿ, ಪ್ರಾಮಾಣಿಕ ಎಂಬ ಮೌಲ್ಯಾಧಾರಿತ ಅಂಶಗಳನ್ನು ಒಳಗೊಂಡಿದೆ. ಪ್ರಸ್ತುತ ಪರಿಸ್ಥಿತಿಯಲ್ಲಿ ಸಮಾಜದ ಪ್ರತಿಯೊಂದು ಕ್ಷೇತ್ರದಲ್ಲೂ ಶಿಸ್ತು, ಸಂಯಮ ಬಹಳ ಅವಶ್ಯಕ. ಇಂದಿನ ಮಕ್ಕಳೇ ಮುಂದಿನ ಪ್ರಜೆಗಳಾಗುವುದರಿಂದ ಮಕ್ಕಳಿಗೆ ಈಗ ಅವರ ವಯೋಮಾನಕ್ಕನುಗುಣವಾಗಿ ಕೆಲವೊಂದು ಪಠ್ಯೇತರ ಚಟುವಟಿಕೆಗಳನ್ನು ಕಲಿಸಬೇಕು. ಅದಕ್ಕಾಗಿ ಸರ್ಕಾರ ಶಾಲಾ, ಕಾಲೇಜುಗಳಲ್ಲಿ ದೈಹಿಕ ಶಿಕ್ಷಣ, ಸೇವಾದಳ, ರಾಷ್ಟ್ರೀಯ ಸೇವಾ ಯೋಜನೆ, ರಾಷ್ಟ್ರೀಯ ಕೆಡೆಟ್ ಕಾರ್ಡ್ ಮುಂತಾದವುಗಳ ಮೂಲಕ ಮೇಲಿನ ಮೌಲ್ಯಗಳನ್ನು ಮಕ್ಕಳಲ್ಲಿ ಬೆಳೆಸಲು ಪ್ರಯತ್ನಿಸುತ್ತಿದೆ. ಆದರೆ ಇವೆಲ್ಲವುಗಳ ಜೊತೆಯಲ್ಲಿ ನಮ್ಮ ಸ್ಕೌಟಿಂಗ್ ಚಳುವಳಿಯು ತನ್ನದೇ ಆದ ವಿಭಿನ್ನ ಆಕರ್ಷಕ, ಸಾಹಸಮಯ, ಸಾಂಸ್ಕೃತಿಕ, ಭಾವೈಕ್ಯತಾ ಮುಂತಾದ ಚಟುವಟಿಕೆಗಳ ಮೂಲಕ ಮಕ್ಕಳಲ್ಲಿ ಸರ್ವತೋಮುಖ ಬೆಳವಣಿಗೆಯನ್ನು ಕಾಣಲು ಸಾಧ್ಯವಾಗುತ್ತಿದೆ. ಇದಕ್ಕೆ ಅನೇಕ ಉದಾಹರಣೆಗಳು ನಮ್ಮ ಕಣ್ಣೆದುರಿಗೆ ಇವೆ. ಒಂದು ಮಗು ಸ್ಕೌಟ್‌ಗೆ ಸೇರಿಸಿಕೊಂಡರೆ ಅವನು ಶಿಬಿರ ವಾಸ(Camp Life)ದ ಅನುಭವ ಪಡೆಯುತ್ತಾನೆ. ಈ ಶಿಬಿರವಾಸವು ಮಗುವಿನಲ್ಲಿ ಧೈರ್ಯವನ್ನು ಮೂಡಿಸುತ್ತದೆ. ಇತರರೊಂದಿಗೆ ಕೂಡಿ ಬದುಕುವುದನ್ನು ಕಲಿಸುತ್ತಿದೆ. ಅಲ್ಲಿ ಅವರು ಅಳವಡಿಸಿಕೊಳ್ಳುವ ಪಟಾಲಂ (Patrol System)ವ್ಯವಸ್ಥೆ ಮಗುವಿನಲ್ಲಿ ಸಮಾನತೆಯ ಭಾವನೆಯನ್ನು ತಾನಾಗೇ ಬೆಳೆಸುತ್ತದೆ. ಸಮಯಕ್ಕೆ ಸರಿಯಾಗಿ ಏಳುವುದು, ಮುಂತಾದ ಬಿ.ಪಿ.ಯವರ ಆರು ವ್ಯಾಯಾಮ(B.P.6)ಗಳನ್ನು ಮಾಡುವುದರಿಂದ ದೈಹಿಕ, ಆರೋಗ್ಯ ಚಟುವಟಿಕೆಗಳಿಗೆ ಒಳ್ಳೆಯ ಸೂತ್ರವಾಗಿದೆ. ಶಿಬಿರದಲ್ಲಿ ಮಗುವು ಕಲಿಯುವ ಚಟುವಟಿಕೆಗಳಾದ ಗಂಟುಗಳು ಲ್ಯಾಷಿಂಗ್ಸ್‌ಗಳು ಮ್ಯಾಪ್‌ರೀಡಿಂಗ್, ಪ್ರಥಮ ಚಿಕಿತ್ಸೆ ಹಾಗೂ ಸುತ್ತುವುದು, ಕಂಪಾಸ್, ಅಂದಾಜು ಮಾಡುವುದು, ಬ್ಯಾಂಡೇಜ್‌ಗಳು, ವಿವಿಧೆ ಧ್ವಜಗಳ ಪರಿಚಯ, ರಾತ್ರಿ ಆಟಗಳು ವನವಿದ್ಯ ಸಂಕೇತಗಳು, ರಾತ್ರಿ ಶಿಬಿರಗಳು, ಸಮುದಾಯ ಅಭಿವೃದ್ಧಿ ಚಟುವಟಿಕೆಗಳು, ಸರ್ವಧರ್ಮ ಪ್ರಾರ್ಥನೆ ಇನ್ನು ಮುಂತಾದವುಗಳು ಮಗುವಿನ ದೈನಂದಿನ ಜೀವನದ ಮೇಲೆ ಮಹತ್ತರ ಪರಿಣಾಮ ಬೀರುತ್ತವೆ. ಇವೆಲ್ಲವುಗಳನ್ನು ಮಗು ಶಾಲೆಯಲ್ಲಿ ಕಲಿಯಲಿಕ್ಕೆ ಸೂಕ್ತ ವಾತಾವರಣ ಸಿಗುವುದಿಲ್ಲ. ಅದಕ್ಕಾಗಿಯೇ ಚಳವಳಿಯ ಜನಕರಾದ ಲಾರ್ಡ್ ಬೇಡನ್ ಪೋವೆಲ್‌ರವರು ಮಕ್ಕಳಿಗಾಗಿ ಸ್ಕೌಟಿಂಗ್ (scouting for Boys) ಎಂಬ ಚಳುವಳಿಯನ್ನು ಪ್ರಾರಂಭಿಸಿದರು. ಮಗು ತಾನು ಶಿಬಿರದ ಗುಂಪಿನಲ್ಲಿ ಕಲಿತ ಚಟುವಟಿಕೆಗಳು ಅವರ ದೈನಂದಿನ ಜೀವನದ ಜೊತೆಯಲ್ಲಿ ಸಮಾಜಕ್ಕೂ ಉಪಯುಕ್ತವಾಗುತ್ತಿವೆ. ಉದಾಹರಣೆ, ಸಮುದಾಯ ಅಭಿವೃದ್ಧಿ ಸೇವೆಯಲ್ಲಿ ಮಗುವು ಮಹತ್ತರವಾದ ಪಾತ್ರ ವಹಿಸುತ್ತಾನೆ. ತನ್ನ ನೆರೆಹೊರೆಯವರಿಗೆ ಸ್ವಚ್ಛತೆಯ ಬಗ್ಗೆ ಶುದ್ಧ ಕುಡಿಯುವ ನೀರಿನ ಬಗ್ಗೆ ಸಸಿಗಳನ್ನು ಬೆಳೆಸುವುದರ ಬಗ್ಗೆ, ಮಳೆ ನೀರನ್ನು ಶೇಖರಣೆ ಮಾಡುವುದರ ಬಗ್ಗೆ, ಸಣ್ಣ ಪ್ರಮಾಣದಲ್ಲಿ ಉಳಿತಾಯವನ್ನು ಮಾಡುವುದರ ಬಗ್ಗೆ ಅರಿವನ್ನು ಮೂಡಿಸುವುದರಲ್ಲಿ ಅವನು ಖಂಡಿತವಾಗಿಯೂ ಯಶಸ್ವಿಯಾಗುತ್ತಾನೆ. ಕೆಲವೊಂದು ಸೇವಾ ಕಾರ್ಯಗಳಲ್ಲೂ ತನ್ನನ್ನು ಗುರುತಿಸಿಕೊಳ್ಳುತ್ತಾನೆ. ಉದಾಹರಣೆಗೆ ಪಲ್ಸ್ ಪೋಲಿಯೋ, ರಕ್ತದಾನ ಶಿಬಿರ, ಧಾರ್ಮಿಕ ಕ್ಷೇತ್ರಗಳಲ್ಲಿ, ಸೇವಾ ಕೇಂದ್ರಗಳಲ್ಲಿ ಸೇವೆಯನ್ನು ಮಾಡುತ್ತಾನೆ. ತನ್ನ ಸ್ನೇಹಿತರಿಗೆ, ನೆರೆಹೊರೆಯವರಿಗೆ ಆಕಸ್ಮಿಕ ಅನಾಹುತಗಳು ಸಂಭವಿಸಿದರೆ, ಉದಾಹರಣೆಗೆ ಹಾವು ಕಚ್ಚಿದರೆ, ರಕ್ತ ಸ್ರಾವವಾದರೆ, ಮೈಗೆ ಬೆಂಕಿ ಹಚ್ಚಿಕೊಂಡರೆ ಖಂಡಿತವಾಗಿಯೂ ಸ್ಕೌಟ್ ಮಗು ತಾನು ಕಲಿತ ಪ್ರಥಮ ಚಿಕಿತ್ಸೆಯ ಅನುಭವದಿಂದ ತನ್ನಲ್ಲಿರುವ ಕೊರಳಪಟ್ಟಿ (Scarf), ಹಗ್ಗ (Rope), ಕೋಲು(Stave), ಚಾಕು (knife), ಪ್ರಥಮ ಚಿಕಿತ್ಸಾ ಪೆಟ್ಟಿಗೆ ಇವುಗಳ ಸಹಾಯದಿಂದ ಅಪಘಾತಕ್ಕೆ ಗುರಿಯಾದವರನ್ನು ರಕ್ಷಿಸಬಲ್ಲ.

ಮೇಲಿನ ಈ ಎಲ್ಲ ಚಟುವಟಿಕೆಗಳನ್ನು ತನ್ನಲ್ಲಿ ರೂಢಿಸಿಕೊಂಡ ಮಗು ಬೇರೆ ಮಕ್ಕಳಿಗಿಂತ ಭಿನ್ನವಾಗಿ ಕಾಣುತ್ತಾನೆ. ತನ್ನ ದಿನನಿತ್ಯದ ಚಟುವಟಿಕೆಗಳಿಗೆ ಹೆಚ್ಚು ಒತ್ತು ಕೊಡುತ್ತಾನೆ. ನಾನು ಕಲಿತಿರುವ ಕೆಲವೊಂದು ಸ್ಕೌಟ್ ಕೌಶಲ್ಯಗಳು ಬೇರೆಯವರಿಗೆ ಉಪಯುಕ್ತವಾಗುತ್ತ ವೆ. ಅಂದರೆ ನಾನು ಬೇರೆಯವರಿಗೆ ಮಾದರಿಯಾಗಿದ್ದೇನೆ ಎಂಬುದನ್ನು ಮಗು ಕಂಡುಕೊಳ್ಳುತ್ತದೆ. ಆಗ ತನ್ನ ಜೀವನದ ದಿಕ್ಕೇ ಬದಲಾಗುತ್ತದೆ. ಇವೆಲ್ಲವುಗಳನ್ನು ಕಲಿತಿರುವ ಮಗುವಿಗೆ ತಾನಾಗಿಯೇ ಸಮಯದ ಪರಿಕಲ್ಪನೆ ಬರುತ್ತದೆ. ಆರ್ಥಿಕ ಮಿತವ್ಯಯ ಉಂಟಾಗುತ್ತದೆ. ನಾನು ಬೇರೆಯವರಿಗೆ ಮಾದರಿಯಾಗಬೇಕಾದರೆ ನನ್ನಲ್ಲಿ ಪ್ರಾಮಾಣಿಕತೆ ಇರಬೇಕು ಎಂಬುದನ್ನು ತಾನಾಗಿ ಕಲಿತುಕೊಳ್ಳುತ್ತದೆ. ಆದ್ದರಿಂದ ಈ ಸ್ಕೌಟ್ - ಗೈಡ್ ಧೈರ್ಯ ಮತ್ತು ಸೂಕ್ತ ಮಗುವಿನ ಶಿಸ್ತು ಬದ್ಧ ಜೀವನಕ್ಕೆ ದಾರಿ ದೀಪವಾಗುತ್ತದೆ. ●

ಒಂದುಗೂಡಿಸುವ ಸಾಮರ್ಥ್ಯವೇ ಪ್ರೇಮ - ಗಾಂಧೀಜಿ.



# ಸ್ಕೌಟ್ಸ್ ಜನಕ ಲಾರ್ಡ್ ಬೇಡನ್ ಪೌಲ್


ಜಿ.ಎಂ. ನರಗುಂದ ಎಲ್.ಟಿ.ಸ್ಕೌಟ್
(ಬೆಂಗೇರಿ) ಹುಬ್ಬಳ್ಳಿ


ಮಕ್ಕಳ ಸರ್ವಾಂಗೀಣ ಬೆಳವಣಿಗೆಗೆ ಅಥವಾ ಸಮಗ್ರ ವ್ಯಕ್ತಿತ್ವ ವಿಕಾಸದತ್ತ ಸ್ಕೌಟ್ಸ್ ಗೈಡ್ಸ್ ಸಂಸ್ಥೆಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪಾವೆಲ್ ಜಗತ್ತಿನಾದ್ಯಂತ ಒಂದು ಅದ್ಭುತ ಚಳವಳಿ ಆರಂಭಿಸಿದರು. ಅವರು ಅಂದು 1907 ರಂದು ಬೇಸಗೆಯ ಹೊಂಬಿಸಿಲಿನಲ್ಲಿ ಇಂಗ್ಲೀಷ್ ಕಡಲ್ಗಾಲುವೆಯ ಬದಿಯ ಬ್ರೌನ್ಸಿ ದ್ವೀಪದಲ್ಲಿ ಬಿತ್ತಿದ ಸ್ಕೌಟ್ ಶಿಬಿರ ಇಂದು ವಿಶ್ವದಾದ್ಯಂತ ಹೆಮ್ಮರವಾಗಿ ಬೆಳೆದು ಮೂಲೆ ಮೂಲೆಗಳಲ್ಲಿ ತನ್ನ ರಂಬೆಗಳನ್ನೂ ಹರಡಿ, ಮಕ್ಕಳ ಸರ್ವತೋಮುಖ ಅಭಿವೃದ್ಧಿಗೆ ನೆರಳಾಶ್ರಯ ನೀಡಿದೆ.

ಒಂಬತ್ತು ದಶಕಗಳನ್ನು ಮೀರಿ. ಜೀವಂತವಾಗಿ ಮುನ್ನಡೆಯುತ್ತ, ತನ್ನ ಆದರ್ಶ ತತ್ವಗಳನ್ನೂ, ಸಾಧನೆಗಳನ್ನೂ, ಅನುಭವಗಳನ್ನೂ ವಿಶ್ವದ ಬಾಲಕ - ಬಾಲಕಿಯರಿಗೆ ಕೊಡುಗೆಯಾಗಿ ನೀಡಿ, ಇಡೀ ಮಾನವ ಜನಾಂಗದ ಸಂಸ್ಕರಣೆಯಲ್ಲಿ ತನ್ನನ್ನೂ ತೊಡಗಿಸಿಕೊಂಡಿರುವ ಏಕೈಕ ಸಂಸ್ಥೆಯೆಂದರೆ ಸ್ಕೌಟ್ಸ್ ಮತ್ತು ಗೈಡ್ಸ್.

ಸ್ಕೌಟಿಂಗಿನ ಹೊರಾಂಗಣ ಚಟುವಟಿಕೆ ಹಲವಾರು. ಕಲಿಯುವ ಕೌಶಲ್ಯ ಹತ್ತಾರು. ಕಾರ್ಯಕ್ರಮ ಸ್ಫೂರ್ತಿ ನೀಡುವಂಥಹವು, ಮನಸ್ಸಿಗೆ ಸಾಕಷ್ಟು ನೆಮ್ಮದಿ ನೀಡುವಂತಹವು, ದೇಹಕ್ಕೆ ಕೆಲಸಕೊಟ್ಟು ಶಕ್ತಿ ನೀಡುವಂತಹವು ಹೀಗಾಗಿ ಕಲಿಯುವ ಇತರರಿಗೆ ಕಲಿಸುವ ವಿಷಯ ವ್ಯಾಪ್ತಿ ವಿಶಾಲ. ಈ ಎಲ್ಲಾ ಕಲಾಪ ಆಧ್ಯಾತ್ಮಿಕ ಹಿನ್ನೆಲೆ ಮತ್ತು ನೈತಿಕ ನೆಲೆ ಇರುವುದು ಸ್ಕೌಟಿಂಗಿನ ವಿಶಿಷ್ಠತೆ.

ನಾಳಿನ ನಾಗರಿಕರಾದ ಇಂದಿನ ಬಾಲಕ - ಬಾಲಕಿಯರಿಗೆ ಸಮಾಜ ಸೇವೆಯ ಮಹತ್ವವನ್ನು ಈ ಸಂಸ್ಥೆ ತಿಳಿಸುತ್ತದೆ. ಪ್ರಪಂಚದಲ್ಲಿ ಸದಾ ಶಾಂತಿ, ಸೌಖ್ಯ, ನೆಮ್ಮದಿ ತುಂಬಿರಬೇಕೆಂಬುದು ಈ ಸಂಸ್ಥೆಯ ಆಕಾಂಕ್ಷೆ. ಅಂತಹ ವಾತಾವರಣ ನಿರ್ಮಾಣಕ್ಕೆ ಪರಿಶ್ರಮಿಸಲು ಬಾಲಕ - ಬಾಲಕಿಯರನ್ನು ಸಜ್ಜುಗೊಳಿಸುವ ಈ ಸಂಸ್ಥೆ ಅಂತರರಾಷ್ಟ್ರೀಯ ಮಟ್ಟಕ್ಕೆ ಬೆಳೆದಿದೆ. ಒಂದು ಶಾಂತಿಯುತ ಚಳವಳಿಯಾಗಿ ಪ್ರಪಂಚದಾದ್ಯಂತ ವ್ಯಾಪಿಸಿದೆ. ಸಂಸ್ಥಾಪಕ ಲಾರ್ಡ್ ಬೇಡನ್ ಪಾವೆಲ್ಲರು ತಾವು ಆರಂಭಿಸಿದ ಆಂದೋಲನ ತಮ್ಮ ಜೀವಿತಾವಧಿಯಲ್ಲಿಯೇ ಹೆಮ್ಮರವಾಗಿ ಬೆಳೆದುದನ್ನು ಕಂಡು ಸಂತಸಪಟ್ಟರು.

ಪಾವೆಲ್ಲರು ಸ್ಥಾಪಿಸಿದ ಸ್ಕೌಟ್ ಪದ್ಧತಿ ಲೋಕಕ್ಕೆ ಈಗಾಗಲೇ ಬೇಕಾದಷ್ಟು ಸೇವೆ ಸಲ್ಲಿಸಿ ಮಾನವ ಸಂಬಂಧಗಳನ್ನು ಗಟ್ಟಿಗೊಳಿಸಿದೆ.

ಲಾರ್ಡ್ ಬೇಡನ್ ಪಾವೆಲ್ಲರ ಹೆಸರು ಪ್ರಪಂಚದ ಎಲ್ಲಾ ಭಾಗಗಳಲ್ಲಿಯೂ ಮನೆ ಮಾತಾಗಿದೆ. ಆಕ್ಸ್‌ಫರ್ಡ್ಸ್ ವಿಶ್ವವಿದ್ಯಾನಿಲಯದ (Gometry) ಪ್ರೊಫೆಸರರಾಗಿದ್ದ ಎಚ್.ಜಿ. ಬೇಡನ್ ಪಾವೆಲ್ಲ ಹಾಗೂ ಹೆನ್ರಿಯೆಟ್‌ಸ್ಮಿತ್ ದಂಪತಿಗಳ ಪುತ್ರನಾಗಿ 1857ರ ಫೆಬ್ರುವರಿ 22 ರಂದು ಲಂಡನ್ನಿನಲ್ಲಿ ಜನಿಸಿದ ಬೇಡನ್ ಪಾವೆಲ್ಲ ಚಿಕ್ಕ ವಯಸ್ಸಿನಲ್ಲಿಯೇ ತಂದೆಯನ್ನು ಕಳೆದುಕೊಂಡರು. ತಾಯಿಯೇ ಏಳು ಮಕ್ಕಳ ಕುಟುಂಬವನ್ನು ಪೋಷಿಸಬೇಕಾಯಿತು.

ಚಿತ್ರಕಲಾವಿದನಾಗಿ, ನೃತ್ಯ ಸಂಗೀತದಲ್ಲಿ ಪಳಗಿದವನಾಗಿ, ಸೈನಿಕನಾಗಿ ಬೇಡನ್ ಪಾವೆಲ್ ನಡೆಸಿದ ಸಾಹಸಮಯ ಜೀವನವೇ, ಅವರಿಂದು ಇಷ್ಟು ಜನಪ್ರಿಯರಾಗಲು ಕಾರಣ. ಪ್ರಾಥಮಿಕ- ಪ್ರೌಢಶಿಕ್ಷಣದ ನಂತರ ತಮ್ಮ 19ನೇ ವಯಸ್ಸಿನಲ್ಲಿ ಸೇನೆಗೆ ಸೇರಿದರು. ತಮ್ಮ ಪ್ರತಿಭೆ ಪರಿಶ್ರಮದಿಂದ ಸೈನ್ಯದಲ್ಲಿ ವಿವಿಧ ಹುದ್ದೆ ಅಲಂಕರಿಸಿದರು.

ಮೆಫೆಕಿಂಗ ಮುತ್ತಿಗೆ :- ಮಹಾತ್ಮಾಗಾಂಧೀಜಿಯವರಂತೆ ಬೇಡನ್ ಪಾವೆಲ್ಲರಿಗೂ ''ದಕ್ಷಿಣ ಆಫ್ರಿಕೆಯೇ'' ಚಳವಳಿಗೆ ಪ್ರೇರಣೆ ನೀಡಿತು. 1899ರ ಅಕ್ಟೋಬರ್ 13 ರಂದು ದಕ್ಷಿಣ ಆಫ್ರಿಕೆಯ ಮೆಫೆಕಿಂಗ್ ಪಟ್ಟಣ ಹಾಲೆಂಡಿನ ''ಬೋಯರ ಜನಾಂಗ''ದವರ ಮುತ್ತಿಗೆಗೆ ಒಳಗಾಯಿತು. ಈ ಮುತ್ತಿಗೆ 217 ದಿನಗಳ ವರೆಗೆ ನಡೆಯಿತು. ಬೋಯರುಗಳ ದಾಳಿಯಿಂದ ಮೆಫೆಕಿಂಗ್ ಪಟ್ಟಣವನ್ನು ರಕ್ಷಿಸಿ ಜಯ ತಂದುಕೊಟ್ಟರು. ಪಾವೆಲ್ ಈ ಕಾರ್ಯಕ್ಕೆ ಮೆಫೆಕಿಂಗ್ ಯುವ ಸೈನ್ಯದಳ ನೀಡಿದ ನೆರವು ಅವಿಸ್ಮರಣೀಯ .ಈ ದಳವನ್ನು ಹುಟ್ಟು ಹಾಕಿದವರು ಲಾರ್ಡ್ ಎಡ್ವರ್ಡ ಸಿಸಿಲ್ ಎಂಬ ಅಧಿಕಾರಿ. ಪಟ್ಟಣದ ಯುವಕರನ್ನು ಒಗ್ಗೂಡಿಸಿ, ಸಮವಸ್ತ್ರ ಕೊಟ್ಟು ತರಬೇತಿ ನೀಡಲಾಯಿತು. ಉತ್ಸಾಹದ ಚಿಲುಮೆಗಳಾದ ಈ ಪುಟ್ಟರೆ (ಯುವಕರೇ) ಸ್ಕೌಟ್ ಚಳವಳಿಗೆ ಸ್ಫೂರ್ತಿಯಾದರು.

ಬೇಡನ್ ಪಾವೆಲ್ಲರು 1907ರಲ್ಲಿ ಇಂಗ್ಲಂಡಿನ ಬ್ರೌನ್ಸಿ ದ್ವೀಪದಲ್ಲಿ ಕೇವಲ 20 ಬಾಲಕರೊಂದಿಗೆ ಪ್ರಾಯೋಗಿಕ ಶಿಬಿರ ನಡೆಸಿದರು. ಜುಲೈ 29 ರಿಂದ ಆಗಸ್ಟ 9 ರವರೆಗೆ ನಡೆದ ಶಿಬಿರದ ಯಶಸ್ಸು ಸ್ಕೌಟ್ಸ್ ಸಂಸ್ಥೆಯ ಉಗಮಕ್ಕೆ ನಾಂದಿಹಾಡಿತು. ಅದು ನಿರೀಕ್ಷೆಗೂ ಮೀರಿ ಯಶಸ್ಸು ಪಡೆಯಿತು.

ಮುಂದಿನ ಜನಾಂಗಕ್ಕಾಗಿ ಸ್ಕೌಟ್ ನಿಯಮ, ತತ್ವ, ಉದ್ದೇಶಗಳ ಕುರಿತು ಗ್ರಂಥವೊಂದನ್ನು ಬರೆಯಬೇಕೆಂದು ಸರ್ ವಿಲಿಯಂ ಸ್ಮಿತ್ ಅವರ ವಿನಂತಿ ಮೇರೆಗೆ ಪೋವೆಲ್ಲರು 1908 ರಲ್ಲಿ ''ಬಾಲಕರಿಗಾಗಿ ಸ್ಕೌಟಿಂಗ್'' (Scouting for Boys) ಪುಸ್ತಕ ಬರೆದರು. ಈ ಪುಸ್ತಕ ಪ್ರಪಂಚದ 36 ಭಾಷೆಗಳಿಗೆ ಅನುವಾದಗೊಂಡಿದೆ.

1910ರಲ್ಲಿ ಸೋದರಿ ಆಗ್ನೇಸ್ ಸಹಕಾರದೊಂದಿಗೆ ಪಾವೆಲ್ಲರು ಹೆಣ್ಣು ಮಕ್ಕಳಿಗಾಗಿ ''ಗೈಡ್ಸ್ ಚಳವಳಿ'' ಪ್ರಾರಂಭಿಸಿದರು. ಅಜ್ಞಾತ ಬಾಲಕನ ಉಪಕಾರ್ದದ ಫಲವಾಗಿ ಅಮೇರಿಕೆಯ ಸಂಯುಕ್ತ ಸಂಸ್ಥಾನಗಳಲ್ಲಿ ಸ್ಕೌಟಿಂಗ್ ಪ್ರವೇಶವಾಯಿತು(Boy Scout of America).

ಮಾಡುತ್ತ ಕಲಿ :- ಮಾಡುತ್ತ ಕಲಿ (Learning by doing) ಎಂಬ ವಿಶಿಷ್ಟ ಶಿಕ್ಷಣ ತತ್ವದಡಿ ಸ್ಕೌಟ್ಸ್ ಗೈಡ್ಸ್ ಸಂಸ್ಥೆ ಕಾರ್ಯನಿರ್ವಹಿಸುತ್ತದೆ. ''ಸದಾಸಿದ್ದನಾಗಿರು'' ಎಂಬುದು ಸ್ಕೌಟ್ ಚಳವಳಿಯ ಧ್ಯೇಯವಾಕ್ಯ. ಸ್ಕೌಟಿಂಗ್ ರಾಷ್ಟ್ರ ಪ್ರೇಮವನ್ನು ತುಂಬುತ್ತದೆ. ರಾಷ್ಟ್ರೀಯತೆಯನ್ನು ಬೆಳೆಸುತ್ತದೆ. ಪ್ರಾಮಾಣಿಕತೆ, ಕರ್ತವ್ಯ ನಿಷ್ಠೆಯನ್ನು ಕಲಿಸಿಕೊಡುತ್ತದೆ.

ಜತೆಜತೆಯಲ್ಲೇ ಸೇವೆ ತ್ಯಾಗಗಳ ಬೀಜವನ್ನು ಅದು ಬಿತ್ತಿ ಬೆಳೆಸುತ್ತದೆ. ಇದೇ ಸ್ಕೌಟಿಂಗಿನ ಮೂಲ ಉದ್ದೇಶ. ''ಒಮ್ಮೆ ಸ್ಕೌಟ್ ಆದವನು ಜೀವ ಮಾನವಿಡೀ ಸ್ಕೌಟ್'' ಎಂಬ ಮಾತು ಪ್ರಚಲಿತದಲ್ಲಿದೆ.

ಸಮಾಜ ಸೇವೆಗೆ ಕಂಕಣಬದ್ದನಾಗಿ ಸ್ಕೌಟ್ ದೀಕ್ಷೆ ಪಡೆದ ವ್ಯಕ್ತಿ ಜೀವನದುದ್ದಕ್ಕೂ ಸ್ಕೌಟ್ ಧ್ಯೇಯಕ್ಕೆ ಅಂಟಿಕೊಂಡೆ ಇರುತ್ತಾನೆ. ಈ ದೀಕ್ಷಾ ಬದ್ಧ ಸೇವೆಯಿಂದಾಗಿಯೇ ಇದು ಇಂದು ವಿಶ್ವ ವ್ಯಾಪಿ ಚಳುವಳಿಯಾಗಿ ಬೆಳೆದಿದೆ.

1909ರಲ್ಲಿ ಬೆಂಗಳೂರು ಮುಖಾಂತರ ಸ್ಕೌಟ್ಸ್ ಚಳುವಳಿ ಭಾರತಕ್ಕೆ ಪ್ರವೇಶಿಸಿತು. ಮದನಮೋಹನ ಮಾಳವೀಯಾ, ಗಾಂಧೀಜಿ, ನೆಹರು, ರವೀಂದ್ರನಾಥ್ ಟ್ಯಾಗೋರ್, ಅನಿಬೆಸೆಂಟ್ ಮುಂತಾದವರು ಸ್ಕೌಟ್ ಚಟುವಟಿಕೆಗಳನ್ನು ಶ್ಲಾಘಿಸಿದ್ದಾರೆ. ಈ ಚಳುವಳಿ ಇಂದು 216ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ ವ್ಯಾಪಿಸಿದೆ. ಕೋಟ್ಯಾಂತರ ಮಕ್ಕಳ ವ್ಯಕ್ತಿತ್ವ ವಿಕಸನಕ್ಕೆ ದಾರಿದೀಪವಾಗಿದೆ.

84 ವರ್ಷದ ತುಂಬು ಜೀವನ ನಡೆಸಿದ ಲಾರ್ಡ್ ಬೇಡನ್ ಪೊವೆಲ್ಲರು 1941ರ ಜನವರಿ 8 ರಂದು ಕೀನ್ಯಾದಲ್ಲಿ ತೀರಿಕೊಂಡರು.

ವಿಶ್ವದ ಪ್ರಧಾನ ಗೈಡ್ ಆಗಿದ್ದ ಇವರ ಪತ್ನಿ ಲೇಡಿ ಒಲಿವ್ ಬೇಡನ್ ಪೋವೆಲ್ 1977 ಜೂನ್ 6 ರಂದು ಕೊನೆಯುಸಿರೆಳೆದರು. ಪಾವೆಲರ ಗೌರವಾರ್ಥ ಪ್ರತಿ ವರ್ಷ ಫೆಬ್ರವರಿ 22 ರಂದು (ಅದು ಅವರ ಜನ್ಮ ದಿನ) ''ಸಂಸ್ಥಾಪಕರ'' ದಿನವನ್ನು ಆಚರಿಸಲಾಗುತ್ತಿದೆ. ಭಾರತ ದೇಶದ ಇಂದಿನ ಪೀಳಿಗೆಗಳು ಸ್ಕೌಟ್ ಚಟುವಟಿಕೆಗಳಲ್ಲಿ ಭಾಗವಹಿಸಿ ಆತ್ಮ ಸಂಪತ್ತಿನಿಂದ, ನೈತಿಕ ಶ್ರದ್ಧೆಯಿಂದ ಹಾಗೂ ಶಾರೀರಿಕ ಪರಿಪೂರ್ಣತೆಯಿಂದ ಸಮರಸ ಸರ್ವಾಂಗ ಸುಂದರವಾಗಿ ಬೆಳೆದು ದೇಶ ಭಕ್ತರಾಗಲಿ, ಅಂದರೆ ಮಾತ್ರ ಆ ಸ್ಕೌಟ್ ಪಿತಾಮಹಾನಾದ ಪಾವೆಲ್ಲರಿಗೆ ನಿಜವಾದ ಗೌರವವನ್ನು ಸಲ್ಲಿಸಿದಂತಾಗುವುದು. ●



# ರಾಷ್ಟ್ರೀಯ ಭಾವೈಕ್ಯತೆ

ಎಸ್. ಹೆಚ್. ಹೂಗಾರ್
ಅಧ್ಯಕ್ಷರು,
ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್,
ದಾವಣಗೆರೆ.

''ವೈವಿಧ್ಯತೆಯಲ್ಲಿ ಐಕ್ಯತೆ, ರಾಷ್ಟ್ರೀಯ ಭಾವೈಕ್ಯತೆ
ಇದನು ತಿಳಿದು ಹೇಳುವಂತಹ ಗುರುವಿಗೇ ಪ್ರಾಧಾನ್ಯತೆ''

ಅಂಧಶ್ರದ್ಧೆ, ದುರಭಿಮಾನ, ಹಿಂಸಾಚಾರವ ಮಾಡದೆ
ಮೂಢನಂಬಿಕೆ, ವಿಧಿ-ವಿವಾದ, ಮತಾಂಧತೆಯನು ತೋರದೆ
ಎಲ್ಲರೊಂದೇ ಎನುವ ತಾರಕ ಮಂತ್ರವನ್ನು ಪಠಿಸುತೆ
ಹಾಡಿ-ಹಾಡಿ ಕುಣಿದು ನಲಿವುದೆ ರಾಷ್ಟ್ರೀಯ ಭಾವೈಕ್ಯತೆ.

ಧರ್ಮ, ಭಾಷೆ, ಸಾಂಸ್ಕೃತಿಕ ಪರಂಪರೆಗಳ ತಿಳಿಯಿರಿ
ಸಂಕುಚಿತ, ದುಷ್ಟಶಕ್ತಿಯ ಭಾವನೆಗಳ ತೊರೆಯಿರಿ
ಒಳ್ಳೆ ನಡತೆ ಚಾರಿತ್ರ್ಯದ ಮೂಲವನ್ನು ತಿಳಿಯಿರಿ
ಭಾರತೀಯರ ಮೌಲ್ಯಗಳನು ಉತ್ತುಂಗದಲಿರಿಸಿರಿ

ನಮ್ಮನೆಲ್ಲರ ಒಂದುಗೂಡಿಪ ಅಗೋಚರ ಚೇತನವಿದೆ
ಹೃದಯ ಹೃದಯಗಳನ್ನು ಬೆಸೆಯುವ ಬಾಂಧವ್ಯವು ಇದಕಿದೆ
ಸಾರ್ವತ್ರಿಕ ಶಾಂತಿಯನ್ನು ವಿಶ್ವದುದ್ದಕು ಸಾರುವ
ಭಾವೈಕ್ಯದ ಭಾವಾರ್ಥವ ಪೇಳುವಾ ಭಾರತೀಯತೆ

ವಿಧೇಯತೆಯನ್ನು ಅರಿತವರಿಗೆ, ಇತರರನ್ನು ಆಳುವುದು ಕಷ್ಟವಲ್ಲ - ನೆಪೋಲಿಯನ್.



# ರಜತ ಮಹೋತ್ಸವದ 25ನೇ ರಾಜ್ಯ ಸ್ಕೌಟ್ಸ್ ಮತ್ತು ಗೈಡ್ಸ್ ಜಾಂಬುರೇಟ್


ಶ್ರೀಮತಿ ಜಾನಕಿ ವೇಣುಗೋಪಾಲ್,
ರಾಜ್ಯ ಸಂಘಟನಾ ಆಯುಕ್ತರು, (ಗೈಡ್ ವಿಭಾಗ)
ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್,
ರಾಜ್ಯ ಸಂಸ್ಥೆ, ಬೆಂಗಳೂರು.


ಕರ್ನಾಟಕ ಮೂಲೆ ಮೂಲೆಗಳಿಂದ ಸ್ಕೌಟ್, ಗೈಡ್ ಮಕ್ಕಳ ಸೈನ್ಯವು ಸಂಭ್ರಮದಿಂದ ಹಿರಿಯರ ನಾಯಕತ್ವದಲ್ಲಿ ದಾವಣಗೆರೆಗೆ ಬಂದು ಬಾಪೂಜಿ ಶಿಕ್ಷಣ ಸಂಸ್ಥೆಯ ಮೈದಾನದಲ್ಲಿ ಗುಡಾರಗಳಲ್ಲಿ ಬೀಡು ಬಿಟ್ಟಿದ್ದಾರೆ. ಎಲ್ಲ ಸಕಲ ಸೌಕರ್ಯಗಳಿಂದ ಸ್ಕೌಟ್, ಗೈಡ್ ನಗರವು ಕಂಗೊಳಿಸುತ್ತದೆ. ಈ ಬಾರಿಯ ವಿಶೇಷವೆಂದರೆ, ಇದು ಕರ್ನಾಟಕದ 25ನೇ ರಜತಮಹೋತ್ಸವದ ಜಾಂಬೋರೇಟ್.

ಜಾಂಬೋರೇಟ್ ಎಂದರೆ ಸ್ಕೌಟ್, ಗೈಡ್‌ಗಳ ಮೇಳ ಅಥವಾ ಸಮಾವೇಶ, ಈ ಸಂಸ್ಥೆಯ ಸಂಸ್ಥಾಪಕರಾದ ಲಾರ್ಡ್ ಬೇಡನ್ ಪೊವೆಲ್ ಮಕ್ಕಳಿಗೆ ನೀಡಿರುವ ಸುವರ್ಣ ಅವಕಾಶ. ಸೃಜನಶೀಲರಾದ ಬಿ.ಪಿ.ರವರು ಮಕ್ಕಳ ಸಮಾವೇಶಕ್ಕೆ ಜಾಂಬೋರಿ ಎಂಬ ಪದವನ್ನು ಸಂಶೋಧಿಸಿದರು. ಜಾಂಬೋರೇಟ್ ಎಂಬುದು ಈ ಪದದ ರೂಪಾಂತರವಾಗಿದೆ. ರಾಜ್ಯ ಮಟ್ಟದ ಮಕ್ಕಳ ಸಮಾವೇಶವನ್ನು ಜಾಂಬೋರೇಟ್ ಎಂದು ಕರೆಯುತ್ತೇವೆ. ಜಾಂಬೋರೇಟ್ ಮತ್ತು ಜಾಂಬೋರಿ ಉದ್ದೇಶಗಳು ಒಂದೇ ಆಗಿ ಅಂತರರಾಷ್ಟ್ರೀಯ ಮಟ್ಟದಲ್ಲಾದರೆ ವಿವಿಧ ದೇಶದ ಮಕ್ಕಳು, ರಾಷ್ಟ್ರ ಮಟ್ಟದಲ್ಲಾದರೆ ವಿವಿಧ ರಾಜ್ಯದ ಮಕ್ಕಳು, ರಾಜ್ಯ ಮಟ್ಟದಲ್ಲಾದರೆ ವಿವಿಧ ಜಿಲ್ಲೆಯ ಮಕ್ಕಳು ಸೇರಿ ಪರಸ್ಪರ ಸಂಸ್ಕೃತಿಯ ಪರಿಚಯ ಮಾಡಿಕೊಳ್ಳುವರು. ಸ್ನೇಹ ಬೆಳೆಸುವರು, ಒಟ್ಟಾಗಿ ಕಲಿಯುವರು, ನಲಿಯುವರು. ಒಳ್ಳೆಯ ಸಂದೇಶ ನೀಡುವರು. ಇದರ ಮತ್ತೊಂದು ಉದ್ದೇಶ ಮಕ್ಕಳಲ್ಲಿ ವಿಶ್ವಭ್ರಾತೃತ್ವ ಮತ್ತು ವಿಶ್ವಶಾಂತಿಯ ಪರಿಕಲ್ಪನೆಯನ್ನು ಮಾಡಿಸುವುದಾಗಿದೆ. ಈ ಮೂಲಕ ಭಾವೈಕ್ಯತೆಯನ್ನು ಬೆಳೆಸಿ ನಾವೆಲ್ಲರೂ ಒಂದೇ ಕುಟುಂಬದವರು, ವಿಶ್ವ ಕುಟುಂಬದವರು ಎಂಬ ಪರಿಕಲ್ಪನೆಯ ಪ್ರತ್ಯಕ್ಷ ಅನುಭವವನ್ನು ನೀಡುವುದಾಗಿದೆ. ಬಿ.ಪಿ. ವಿಶ್ವಮಾನವರು. ವಿಶ್ವಮಾನ್ಯರೆನಿಸಿಕೊಂಡು ವಿಶ್ವದ ಮಕ್ಕಳ ಬಗ್ಗೆ ಕಾಳಜಿ ವಹಿಸಿದರು. ಈ ವಿಧದ ಹಂತದ ಮಕ್ಕಳ ಸಮಾವೇಶಗಳನ್ನು ಭಾವೈಕ್ಯತೆ ಮತ್ತು ಶಾಂತಿಗಾಗಿ ನೀಡಿರುವುದು ಒಂದು ಅಪೂರ್ವ ಮಾರ್ಗೋಪಾಯವಾಗಿದೆ. ಇವರ ಪತ್ನಿಯಾದ ಅಲೇವ್ ಬಿ.ಪಿ.ಯವರು ವಿಶ್ವ ಕುಟುಂಬದ ಪರಿಕಲ್ಪನೆಯನ್ನು ಈ ಸರಳ ನುಡಿಯಲ್ಲಿ ಹೇಳಿದ್ದಾರೆ. ''ನಾನು ನಿಮ್ಮವಳು, ನೀವು ನನ್ನ ವರು, ನಾವೆಲ್ಲರೂ ಈ ವಿಶ್ವ ಕುಟುಂಬದವರು''. ಬಿ.ಪಿ.ಯವರು ಸ್ಕೌಟ್, ಗೈಡ್ಸ್ ಮಕ್ಕಳನ್ನು ವಿಶ್ವದ ಶಾಂತಿ ದೂರೆಯಲೆಂದು ಕರೆದಿದ್ದಾರೆ.

ಈ ಸಮಾವೇಶವು ಮಕ್ಕಳಲ್ಲಿ ಈ ಕೆಳಗಿನ ಕೌಶಲ, ಅರಿವು ಮತ್ತು ಮೌಲ್ಯಗಳನ್ನು ಘೋಷಿಸುತ್ತದೆ.

ಸಾಮಾನ್ಯ ಅರಿವು ಮತ್ತು ಜೀವನದ ಬಗೆಗಿನ ಅನುಭವ ಪಡೆಯುವರು.

ಸ್ಕೌಟ್, ಗೈಡ್ ಕೌಶಲಗಳ ಮತ್ತು ಜೀವನದ ಕೌಶಲಗಳ ಪ್ರಾತ್ಯಕ್ಷ ಅನುಭವ ಪಡೆಯುವರು.

ಜೀವನದ ಮೌಲ್ಯಗಳಾದ ದೈವ ಭಕ್ತಿ, ದೇಶ ಭಕ್ತಿ, ಶಿಸ್ತು, ಶಿಷ್ಟಾಚಾರ, ಸ್ನೇಹ, ಹೊಂದಾಣಿಕೆ, ಒಗ್ಗಟ್ಟು, ಸಹಕಾರ, ಆರೋಗ್ಯಕರ ಸ್ಪರ್ಧಾ ಮನೋಭಾವ, ಸ್ಫೂರ್ತಿ, ಭಾವೈಕ್ಯತೆ, ಭ್ರಾತೃತ್ವ, ಸಾಹಸ, ಅನ್ವೇಷಣೆ, ಮೆಚ್ಚುಗೆ ಹೀಗೆ ಅನೇಕಾನೇಕ ಮೌಲ್ಯಗಳ ಅನುಭವ ಪಡೆಯುವರು.

ಈ ಅರಿವು,ಕೌಶಲ ಮೌಲ್ಯಗಳ ಅನುಭವಗಳನ್ನು ವೈವಿಧ್ಯಮಯ ಚಟುವಟಿಕೆಗಳ ಮೂಲಕ ನೀಡಲಾಗುವುದು.

ಬೆಳಿಗ್ಗೆ 5.30ರಿಂದ ರಾತ್ರಿ 10.30ರವರೆಗಿನ ದೈಹಿಕ ದಿನಚರಿಯ ವೇಳಾಪಟ್ಟಿ ಮತ್ತು ಶಿಬಿರದ ನಿಯಮಗಳು.

ವಿವಿಧ ರೀತಿಯ ಸ್ಕೌಟ್, ಗೈಡ್ ಕೌಶಲಗಳ ಸ್ಪರ್ಧೆ, ರಸಪ್ರಶ್ನೆ, ಸಾಹಸ ಚಟುವಟಿಕೆ,ಹೊರ ಸಂಚಾರ, ಸೃಜನಶೀಲ ಚಟುವಟಿಕೆಯಾದ ಸ್ಥಳದಲ್ಲೇ ವಸ್ತುಗಳನ್ನು ತಯಾರಿಸುವುದು.

- ಸಮುದಾಯ ಸ್ನೇಹಕಾರ್ಯ,
- ಶಿಬಿರಾಗ್ನಿ, ಸಂಸ್ಕೃತಿ ಪ್ರತಿಭೆಗಳ ಪ್ರದರ್ಶನ ಹಾಗೂ ಮನರಂಜನೆ
- ಪ್ರತಿದಿನದ ಧ್ವಜಾರೋಹಣ, ಪ್ರಾರ್ಥನೆ, ಸರ್ವಧರ್ಮ ಪ್ರಾರ್ಥನೆ, ವ್ಯಾಯಾಮಗಳು.
- ವಸ್ತು ಪ್ರದರ್ಶನದಿಂದ ಕಲಿಕೆ, ಅರಿವು ಮೆಚ್ಚುಗೆ.
- ಇವೆಲ್ಲದರ ಜೊತೆಗೆ ಹಿರಿಯರ ಹಿತವಚನ ಮತ್ತು ಮಾರ್ಗದರ್ಶನ ಹಾಗೂ ಸರ್ವಧರ್ಮ ಪ್ರಾರ್ಥನೆ.

ಹೀಗೆ ಒಂದೇ ಎರಡೇ ಬಿಡುವಿಲ್ಲದ ಚಟುವಟಿಕೆಗಳು. ಏಳು ದಿನಗಳ ಕಾಲ ಸತತವಾಗಿ ನಡೆಯುತ್ತಲೇ ಇರುತ್ತವೆ. ಜೇನು ನೊಣಗಳಂತೆ ಬಿಡುವಿಲ್ಲದೆ ಚಿಕ್ಕ ಚಿಕ್ಕ ಗುಂಪುಗಳಲ್ಲಿ ಮಕ್ಕಳು ನಡೆದಾಡುತ್ತಲೇ ಇರುತ್ತಾರೆ. ಈ ಚಟುವಟಿಕೆಗಳು ದೇಹಕ್ಕೆ ಮತ್ತು ಮನಸ್ಸಿಗೆ ಕಸರತ್ತು ನೀಡುತ್ತವೆ. ಇಷ್ಟೆಲ್ಲಾ ಕೆಲಸ ಮಾಡುವುದಕ್ಕೆ ಶಕ್ತಿ ಬೇಡವೇ? ಇದಕ್ಕಾಗಿ ಅವರವರ ಜಿಲ್ಲಾ ಸಂಸ್ಥೆಯವರು ರುಚಿಕರವಾದ, ಆರೋಗ್ಯಕರವಾದ, ಊಟೋಪಚಾರಗಳನ್ನು ಏರ್ಪಡಿಸಿರುತ್ತಾರೆ. ಇದರ ಜೊತೆಗೆ ವಿಶ್ರಾಂತಿ ಮತ್ತು ನಿದ್ರೆಯ ಬಗ್ಗೆಯೂ ಗಮನ ನೀಡಲಾಗುವುದು.

ಒಟ್ಟಿನಲ್ಲಿ ಜಾಂಬೋರೇಟ್‌ನ ಅನುಭವಗಳು ಚಿರಸ್ಮರಣೀಯವಾಗಿರುತ್ತವೆ ಮತ್ತು ಜೀವನದಲ್ಲಿ ಅನುಸರಿಸಲು ಯೋಗ್ಯವಾಗಿರುತ್ತವೆ. ಇಷ್ಟೊಂದು ಅಪಾರ ಅನುಭವಗಳು ಒಟ್ಟಾಗಿ ಮತ್ತೆಲ್ಲೂ ಸಿಗಲು ಸಾಧ್ಯವಿಲ್ಲ. ಈ ಅಪೂರ್ವ ಕಾರ್ಯಕ್ರಮಗಳನ್ನು ಸಂಶೋಧಿಸಿದ ವಿಶ್ವಮಾನವ ಬಿ.ಪಿ.ಯವರಿಗೆ ನಮ್ಮ ನಮನ. ●

ನೀವು ದೊಡ್ಡ ಮನುಷ್ಯರಾಗಿದ್ದರೆ, ಯಾವ ಕರ್ತವ್ಯವನ್ನೂ ಸಣ್ಣದೆಂದು ಭಾವಿಸಲಾರಿರಿ - ಜಾರ್ಜ್ ಮೆಕ್ಡೊನಾಲ್.



# ಉತ್ತಮ ಸ್ಕೌಟ್ -ಗೈಡ್‌ಗಳಾಗಲು ಪೂರಕ ಯೋಗ


ಶ್ರೀಮತಿ ಓಂಕಾರಮ್ಮ ರುದ್ರಮುನಿಸ್ವಾಮಿ
ಲೇಖಕಿ, ಶಿಕ್ಷಕಿ ,
ದಾವಣಗೆರೆ


''ಸೇವೆಗೆ ಸದಾ ಸಿದ್ಧನಾಗಿರು'' ಎಂಬ ಧ್ಯೇಯ ವಾಕ್ಯವನ್ನು ಹೊಂದಿರುವ ಅಂತರಾಷ್ಟ್ರೀಯ ಸೇವಾ ಸಂಸ್ಥೆಯಾದ ಸ್ಕೌಟ್ ಮತ್ತು ಗೈಡ್ ಇಂದು ಅತ್ಯಂತ ಜನಪ್ರಿಯತೆಯನ್ನು ಹೊಂದಿದ ಸೇವಾ ಸಂಸ್ಥೆಯಾಗಿದೆ. ಇಂದು ನಗರ ಮಟ್ಟದ ಶಾಲೆಗಳಲ್ಲದೆ, ಗ್ರಾಮೀಣ ಶಾಲೆಗಳಲ್ಲೂ ಕೂಡ ಸ್ಕೌಟ್-ಗೈಡ್ ಘಟಕಗಳನ್ನು ತೆರೆಯಲಾಗುತ್ತಿದೆ. ಇಲ್ಲಿ ನಡೆಸುವ ಅನೇಕ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ಸ್ಕೌಟ್ ಕ್ಯಾಂಪ್‌ಗಳು ಹೆಚ್ಚಿನ ಮಹತ್ವದ ಪಾತ್ರವನ್ನು ವಹಿಸುತ್ತವೆ. ಅಷ್ಟೇ ಅಲ್ಲದೆ ಸ್ಕೌಟ್-ಗೈಡ್ ಮಕ್ಕಳ ದೈಹಿಕ ಸಾಮರ್ಥ್ಯವನ್ನು ಹೆಚ್ಚಿಸಲಿಕ್ಕೆ, ಆತ್ಮ ವಿಶ್ವಾಸ, ಮನೋನಿಗ್ರಹವನ್ನು ಬೆಳೆಸಿಕೊಳ್ಳುವುದಕ್ಕೆ ''ಯೋಗಾಭ್ಯಾಸ''ದ ತರಬೇತಿಯನ್ನು ಕೂಡಾ ನೀಡಲಾಗುತ್ತಿದೆ.

ಯೋಗಾಭ್ಯಾಸ ತರಬೇತಿಯನ್ನು ಪಡೆಯುವ ಮಕ್ಕಳು ಕೆಲವೊಂದು ನಿಯಮಗಳನ್ನು ಪಾಲಿಸಬೇಕಾಗುತ್ತದೆ.

1. ಮುಂಜಾನೆ ಬೇಗ ಏಳಬೇಕು. ಯೋಗಾಭ್ಯಾಸಕ್ಕೆ ಪ್ರಾತಃಕಾಲವು ಶ್ರೇಷ್ಠವಾದುದು. ಹಾಗೆಯೇ ಸಂಜೆಯ ಕಾಲವೂ ಕೂಡ ಸೂಕ್ತವಾದುದು.
2. ಉಸಿರಾಟದ ಕ್ರಮವನ್ನು ಕಡ್ಡಾಯವಾಗಿ ಅರಿತು ಯೋಗಾಭ್ಯಾಸವನ್ನು ಮಾಡಬೇಕಾಗುತ್ತದೆ.
3. ಪೂರಕ ಅಂದರೆ ಶ್ವಾಸವನ್ನು ಒಳಗೆ ತೆಗೆದುಕೊಳ್ಳುವುದು, ಕುಂಭಕ ಅಂದರೆ ಶ್ವಾಸವನ್ನು ದೇಹದ ಒಳಗೆ ಇಟ್ಟುಕೊಳ್ಳುವುದು. ರೇಚಕ ಎಂದರೆ ಶ್ವಾಸವನ್ನು ಹೊರಗೆ ಹಾಕುವುದು.
4. ಯೋಗಾಭ್ಯಾಸದ ಸಮಯದಲ್ಲಿ ನಾಭಿಯಿಂದ ಆಳವಾಗಿ ಪೂರಕ ಮತ್ತು ರೇಚಕಗಳನ್ನು ಮಾಡಬೇಕು.
5. ಅಭ್ಯಾಸದ ಸಮಯದಲ್ಲಿ ಮಾತು, ನಗು ಅನಗತ್ಯವಾಗಿ ಆಕಡೆ ಈ ಕಡೆ ನೋಡುವುದನ್ನು ಬಿಟ್ಟು ಏಕಾಗ್ರತೆಯನ್ನು ಸಾಧಿಸಬೇಕು.
6. ಅಭ್ಯಾಸದ ಕೊನೆಯಲ್ಲಿ ಕಡ್ಡಾಯವಾಗಿ ಶವಾಸನವನ್ನು ಹಾಕಬೇಕು.
7. ಶವಾಸನದ ಮಹತ್ವವನ್ನು ಅರಿತಿರಬೇಕು.
8. ಆಸನಗಳನ್ನು ಮಾಡಲು ಶುಭ್ರವಾದ ಬಟ್ಟೆಯನ್ನು ನೆಲದ ಮೇಲೆ ಹಾಸಿಕೊಳ್ಳಬೇಕು.
9. ಅಭ್ಯಾಸದ ಸಮಯದಲ್ಲಿ ಪ್ರಸನ್ನಚಿತ್ತದಿಂದ, ಮಂದಸ್ಮಿತದೊಡನೆ ಆಸನಗಳನ್ನು ಅಭ್ಯಾಸ ಮಾಡಬೇಕು. ಹಾಗೆ ಮಾಡಿದಲ್ಲಿ ಹೆಚ್ಚಿನ ಪರಿಣಾಮ ಉಂಟಾಗುವುದು.
10. ಕೇವಲ ಕ್ಯಾಂಪ್‌ಗಳಲ್ಲಿ ಮಾತ್ರವಲ್ಲದೆ ಆಸನಗಳನ್ನು ಪ್ರತಿದಿನ ಮಾಡುವ ಅಭ್ಯಾಸವನ್ನು ರೂಢಿಸಿಕೊಳ್ಳಬೇಕು.
11. ನುರಿತ ಶಿಕ್ಷಕರಿಂದ ಅಥವಾ ಮಾರ್ಗದರ್ಶಕರಿಂದ ಯೋಗ ತರಬೇತಿಯನ್ನು ಪಡೆಯಬೇಕು.

## ಪ್ರಯೋಜನಗಳು :

ಈ ರೀತಿ ಅಭ್ಯಾಸವನ್ನು ಮಾಡುವ ಮಕ್ಕಳಿಗೆ ಯೋಗ ತರಬೇತಿಯಿಂದ ಅನೇಕ ಪ್ರಯೋಜನಗಳುಂಟಾಗುವವು.

1. ದೇಹವು ಸದೃಢವಾಗುವುದು
2. ಮನಸ್ಸು ಪ್ರಫುಲ್ಲವಾಗುವುದು
3. ಮಕ್ಕಳಲ್ಲಿರುವ ಕೀಳರಿಮೆ ಕಡಿಮೆಯಾಗುವುದು
4. ಆತ್ಮ ವಿಶ್ವಾಸ ಹೆಚ್ಚುವುದು
5. ಕೆಟ್ಟ ವಿಚಾರಗಳು ಕಡಿಮೆಯಾಗಿ, ಒಳ್ಳೆಯ ಅಭ್ಯಾಸಗಳನ್ನು ರೂಢಿಸಿಕೊಳ್ಳುವರು.
6. ಮನಸ್ಸಿಗೆ ಏಕಾಗ್ರತೆ ಬರುವುದು. ನೆನಪಿನ ಶಕ್ತಿ ಹೆಚ್ಚುವುದು
7. ಓದಿನಲ್ಲಿ ಆಸಕ್ತಿ , ಪಠ್ಯೇತರ ಚಟುವಟಿಕೆಗಳಲ್ಲಿ ಉತ್ಸಾಹದಿಂದ ಭಾಗವಹಿಸುವ ಮನೋಭಾವ ಬೆಳೆಯುವುದು.
8. ಕ್ಯಾಂಪ್‌ಗಳಲ್ಲಿನ ಕ್ಲಿಷ್ಟಕರ ಕೆಲಸಗಳಲ್ಲಿ ಉತ್ಸಾಹ ಹೆಚ್ಚುವುದು. ಬಳಲಿಕೆ, ಆಯಾಸ ಕಡಿಮೆಯಾಗುವುದು.
9. ಬೆಳಿಗ್ಗೆಯಿಂದ ರಾತ್ರಿಯವರೆಗೂ ಅಂದರೆ ದಿನವಿಡೀ ಚಟುವಟಿಕೆಯಲ್ಲಿರುವರು.
10. ಪರಿಪೂರ್ಣ ವ್ಯಕ್ತಿತ್ವ ಪಡೆಯಲಿಕ್ಕೆ ಮುಂದೆ ಸತ್ಪ್ರಜೆಗಳಾಗಿ ಬಾಳಲಿಕ್ಕೆ ಯೋಗ ಅತ್ಯಂತ ಉಪಯುಕ್ತವಾದದ್ದು.

ಯೋಗಾಭ್ಯಾಸದ ಗುರಿಯು ದೇಹವನ್ನು ಸದೃಢವಾಗಿಟ್ಟುಕೊಳ್ಳುವುದಲ್ಲದೆ, ಮನಸ್ಸನ್ನು ಹತೋಟಿಯಲ್ಲಿಟ್ಟುಕೊಳ್ಳುವುದೇ ಆಗಿದೆ. ಈ ವಿಧವಾದ ಮನೋಭಾವವುಳ್ಳ ಯೋಗಾಭ್ಯಾಸಿಯು, ವಿವಿಧ ಆಸನಗಳ ಅಭ್ಯಾಸದಲ್ಲಿ ತೊಡಗಿದ್ದಾಗ, ತನ್ನಲ್ಲಿ ಒಳಹೊಕ್ಕು, ಸರ್ವಾಂತರ್ಯಾಮಿಯಾದ ಪರಮಾತ್ಮನ ಇರವನ್ನು ಮನತಿಳಿದು, ಅದಕ್ಕೇ ಅವನು ಶರಣಾಗಿ ಆ ಮೂಲಕ ಆತ್ಮಸಾಕ್ಷಾತ್ಕಾರದಿಂದ ಮುಕ್ತಿಯನ್ನು ಪಡೆಯುತ್ತಾನೆ. ಇದೇ ಯೋಗಾಭ್ಯಾಸಕನಿಗೆ ದೊರಕುವ ಅತ್ಯಧಿಕ ಫಲವೂ ಆಗಿದೆ. ●

### ಈ ಕರ್ತವ್ಯಗಳನ್ನು ಮಾಡೋಣ:

ನಮ್ಮ ರಾಷ್ಟ್ರಧ್ವಜ, ರಾಷ್ಟ್ರಗೀತೆಯನ್ನು ಗೌರವಿಸೋಣ.

ಸ್ವಾತಂತ್ರ್ಯ ಸಂಗ್ರಾಮದ ಆದರ್ಶ ಪಾಲಿಸುತ್ತಾ ರಾಷ್ಟ್ರದ ಸ್ವತಂತ್ರ್ಯವನ್ನು ಕಾಪಾಡಿಕೊಳ್ಳೋಣ, ರಾಷ್ಟ್ರಕ್ಕಾಗಿ ತ್ಯಾಗ ಮಾಡೋಣ.

ಒಗ್ಗಟ್ಟಿನಿಂದ, ಅಖಂಡವಾಗಿ ಭೇದ ಭಾವಗಳನ್ನು ಮರೆತು ಒಮ್ಮತದಿಂದ ಬಾಳೋಣ.

ಸಂಸ್ಕೃತಿ ಪರಂಪರೆಯನ್ನು ಗೌರವಿಸೋಣ.

ಪ್ರಕೃತಿಯನ್ನು ಮಾನವ ನಿರ್ಮಿತ ಕೃತಿಗಳನ್ನು ಸಂರಕ್ಷಿಸೋಣ.

ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳೋಣ.

ನಮ್ಮ ಹಾಗು ರಾಷ್ಟ್ರದ ಅಭಿವೃದ್ಧಿಗಾಗಿ ಪ್ರಾಮಾಣಿಕವಾಗಿ ಶ್ರಮಿಸೋಣ. ●

ತಲೆ ಬಾಗಿಸಲು ಪ್ರಾರಂಭಿಸುವಾಗಲೇ - ಬೆಳೆಯಲೂ ಪ್ರಾರಂಭಿಸುತ್ತೇವೆ. - ಕೋಲ್ರಿಡ್ಜ್

# ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಹತ್ವ

ನಂದೀಶ ಹೆಚ್.ಜಿ.ಎಂ.
8ನೇ ತರಗತಿ
ಸ್ಕೌಟ್ ವಿದ್ಯಾರ್ಥಿ, ಹರಪನಹಳ್ಳಿ .

ಮಕ್ಕಳು ಶಕ್ತಿಯ ಅಮೂರ್ತ ರೂಪ. ಸ್ಫಟಿಕದಷ್ಟು ತಿಳಿಯಾಗಿರುತ್ತದೆ ಅವರ ಮನಸ್ಸು. ಅಂತಹ ಮಕ್ಕಳ ಮನಸ್ಸನ್ನು ಸರಿಯಾಗಿ ರೂಪಿಸುವುದರಿಂದ ರಾಷ್ಟ್ರದ ಭವಿಷ್ಯ ರೂಪಿಸಬಹುದಾಗಿದೆ. ಅವರನ್ನು ನಾಳಿನ ಸತ್‌ಪ್ರಜೆಗಳು, ದೇಶದ ಆಧಾರ ಸ್ಥಂಬಗಳೆಂದು ಪರಿಗಣಿಸಿದೆ. ಚಿಕ್ಕಂದಿನಲ್ಲಿಯೇ ಧರ್ಮ, ಸಂಸ್ಕೃತಿಗಳ ಅರಿವು ಮತ್ತು ರಕ್ಷಣೆ ಸ್ಕೌಟ್ಸ್‌ಮತ್ತು ಗೈಡ್ಸ್‌ನ ಒಂದು ಭಾಗವಾಗಿ ಮಕ್ಕಳ ಮನಸ್ಸಿನ ಮೇಲೆ ಪ್ರಭಾವ ಬೀರುತ್ತದೆ. ಸ್ವತಂತ್ರ ಪೂರ್ವದಿಂದಲೇ ಲಾರ್ಡ್ ಬೇಡನ್ ಪಾವೆಲ್‌ರು ದೇಶ ಪ್ರೇಮ, ದೇಶ ಸೇವೆ, ಶಿಸ್ತು, ಸಂಯಮ, ತ್ಯಾಗ, ಸಹನೆ, ಸಂಸ್ಕಾರಗಳ ವಿಚಾರಗಳನ್ನು ಅನುಷ್ಠಾನಕ್ಕೆ ತಂದು ದೊಡ್ಡ ಹೆಸರು ಮಾಡಿದ್ದಾರೆ.

ಬೆಳೆಯುವ ಮಕ್ಕಳು ಶಿಸ್ತಿನ ಸಿಪಾಯಿಗಳಾಗಬೇಕು. ಎಂಬುದು ಎಲ್ಲಾ ತಂದೆ- ತಾಯಿಯರ ಕನಸು. ಅದಕ್ಕಾಗಿ ಮಕ್ಕಳನ್ನು ಸ್ಕೌಟ್ಸ್ ಮತ್ತು ಗೈಡ್ಸ್‌ಗೆ ಸೇರಿಸಿ, ಮಕ್ಕಳು ಧರಿಸುವ ಗರಿಗರಿಯಾದ ಉಡುಪುಗಳನ್ನು ಕಂಡು ಪುಳಕಿತರಾಗುತ್ತಾರೆ. ಇದಕ್ಕೆ ಸೇರಿದ ಮಕ್ಕಳ ಮನಸ್ಸಿನಲ್ಲಿ ಒಂದೇ ರೀತಿಯ ಹರ್ಷದ ಅಲೆ ತುಂಬಿರುತ್ತದೆ.

ದೇಶದ ಪ್ರತಿಯೊಂದು ಮನೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಇರಬೇಕು ಎಂಬುದು ಮಹಾತ್ಮ ಗಾಂಧಿಯವರ ಕನಸಾಗಿತ್ತು.

ಕರ್ನಾಟಕದ ಸ್ಕೌಟ್ಸ್‌ಮತ್ತು ಗೈಡ್ಸ್ ಚರಿತ್ರೆ ಬಹುದೊಡ್ಡದು. ಅಂದಿನ ಮೈಸೂರ ರಾಜ್ಯದಲ್ಲಿ ಮೊದಲ ಬಾರಿಗೆ ಸ್ಕೌಟ್ಸ್ ಜಾರಿಗೆ ತಂದ ರಾಜ್ಯ ಎಂಬ ಹೆಗ್ಗಳಿಕೆಗೆ ಪಾತ್ರವಾಗಿತ್ತು. ಅಂದಿನ ದಿನಗಳಲ್ಲಿ ಸ್ಕೌಟ್ಸ್ ಪಡೆ ರಾಜ್ಯಕ್ಕೆ ಹೆಮ್ಮೆ ತರುವ ಚಟುವಟಿಕೆಯಾಗಿತ್ತು. 1917ರಲ್ಲಿ ಹೊರಡಿಸಿದ ಸರಕಾರಿ ಆದೇಶದಲ್ಲಿ ಶಾಲಾ ವಿದ್ಯಾರ್ಥಿಗಳಲ್ಲಿ ದೇಶ ಭಕ್ತಿ, ಪ್ರಾಮಾಣಿಕತೆ, ಶಿಸ್ತು ಮೈಗೂಡಲು ಸ್ಕೌಟ್ಸ್ ಆರಂಭಿಸುವಂತೆ ಸೂಚಿಸಲಾಗಿತ್ತು. ಅದರಂತೆ ಮೈಸೂರಿನಲ್ಲಿ ಮೊದಲ ಬಾರಿಗೆ ಬಾಲಕರ ಸ್ಕೌಟ್ಸ್ ಪಡೆ ಪ್ರಾರಂಭವಾಯಿತು. ಕೆನಡಿಯಲ್ಲಿ ಸ್ಕೌಟ್ಸ್ ಪ್ರಾಂಕ್ ಸಿ. ಪಿರ್ವಿನ್ ಅಂದಿನ ಮೈಸೂರು ರಾಜ್ಯದ ಮೊದಲ ಸ್ಕೌಟ್ಸ್ ನಿರ್ದೇಶಕರಾದರು. ಮೈಸೂರಿನ ಮಹಾರಾಜ ಕೃಷ್ಣರಾಜ ಒಡೆಯರ್ ಸ್ಕೌಟ್ಸ್ ಚಳುವಳಿಗೆ ಅಪಾರ ಪ್ರೋತ್ಸಾಹ ನೀಡಿದರು. ನಂತರದ ದಿನಗಳಲ್ಲಿ ಮೈಸೂರು ಸಂಸ್ಥಾನದ ಯುವರಾಜ ಕಂಠೀರವ ನರಸಿಂಹರಾಜ ಒಡೆಯರ್ ರಾಜ್ಯದ ಚೀಫ್ ಸ್ಕೌಟ್ಸ್ ಆದರು. ಸ್ಕೌಟ್ಸ್ ಪಡೆಯ ಮಧ್ಯೆ ಯುವರಾಜ ಸ್ಕೌಟ್ಸ್ ಸಮವಸ್ತ್ರಧರಿಸಿ ನಿಂತಿದ್ದನ್ನು ನೋಡಿದ ಸಾವಿರಾರು ಬಾಲಕರು ಉತ್ಸಾಹದಿಂದ ಸ್ಕೌಟ್ಸ್ ಪಡೆಗೆ ಸೇರಿದರು. ಈ ಮೂಲಕ ಸ್ಕೌಟ್ಸ್ ಆಂದೋಲನ ರಾಜ್ಯದ ಮೂಲೆ ಮೂಲೆಗಳಲ್ಲಿ ಹೆಚ್ಚು ಪ್ರಚಾರವಾಯಿತು. ಶಾಲೆಗಳಲ್ಲಿ ವಿದ್ಯಾರ್ಥಿಗಳು ತಾವಾಗಿಯೇ ಸ್ಕೌಟ್ಸ್‌ಗೆ ಸೇರಿದರು.

1920ರಲ್ಲಿ ಚಿಕ್ಕಮಗಳೂರಿನಲ್ಲಿ ಮೊದಲ ರಾಜ್ಯ ಮಟ್ಟದ ಸ್ಕೌಟ್ಸ್, ಗೈಡ್ಸ್ ಮಹಾಮೇಳ ನಡೆಯಿತು. ಅದರಲ್ಲಿ 270 ವಿದ್ಯಾರ್ಥಿಗಳು ಭಾಗವಹಿಸಿದ್ದರು. ಅದೇ ವರ್ಷ ಬಂಗಾರಪೇಟೆಯಲ್ಲಿ ನಡೆದ ಎರಡನೇ ಮಹಾಮೇಳದಲ್ಲಿ ಭಾಗವಹಿಸಿದವರ ಸಂಖ್ಯೆಯು 500ಕ್ಕೆ ಏರಿತು. 1931 ರಲ್ಲಿ ಮೈಸೂರಿನಲ್ಲಿ ನಡೆದ ಮಹಾಮೇಳಕ್ಕೆ ವಿದ್ಯಾರ್ಥಿಗಳ ಸಂಖ್ಯೆ 900ಕ್ಕೆ ಏರಿತು. ಹೀಗೆ ಪ್ರತಿ ಬಾರಿಯೂ ಮಹಾಮೇಳ ನಡೆದಾಗ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಲೇ ಹೋಯಿತು.

1986ರಲ್ಲಿ ಬೆಂಗಳೂರಿನ ಅರಮನೆಯ ಮೈದಾನದಲ್ಲಿ ನಡೆದ ಮಹಾಮೇಳದಲ್ಲಿ ಭಾಗವಹಿಸಿದ್ದ ಅತಿಥಿ ಅಂದಿನ ಪ್ರಧಾನಿ ರಾಜೀವ್ ಗಾಂಧಿ ನೆರೆದ ಸಾವಿರಾರು ಸ್ಕೌಟ್ಸ್ ಗೈಡ್ಸ್ ವಿದ್ಯಾರ್ಥಿಗಳತ್ತ ಕೈ ಬೀಸಿದಾಗ ವಿದ್ಯಾರ್ಥಿಗಳು ಪುಳಕಿತಗೊಂಡಿದ್ದರು.

20ರ ದಶಕದಲ್ಲಿ , ಭಾರತದಲ್ಲಿ ಬಾಲಕಿಯರ ಗೈಡ್ಸ್ ಆಂದೋಲನ ಕೂಡ ಆರಂಭವಾಯಿತು.

ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಸೇವೆ ಸದಾ ಸಮಾಜಕ್ಕೆ ಲಾಭವಾಗುತ್ತದೆ. ವಯಸ್ಕ ಶಿಕ್ಷಣ, ಸಮುದಾಯ ಕಾರ್ಯಕ್ರಮ, ಕುಷ್ಠರೋಗ ನಿರ್ಮೂಲನೆ, ನೈರ್ಮಲ್ಯ ಕಾರ್ಯಕ್ರಮ ಅನುಷ್ಠಾನ, ಪಲ್ಸ್ ಪೋಲಿಯೋ, ಪ್ರಚಾರ ಆಂದೋಲನದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಮುಂದಾಗಿ ಕಾರ್ಯನಿರ್ವಹಿಸುತ್ತಾರೆ. ಕರ್ನಾಟಕ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಅನೇಕ ಸಾಧನೆಗೈದಿದ್ದಾರೆ. ಅವುಗಳಲ್ಲಿ ಚೆನ್ನೈಯಲ್ಲಿ ನಡೆದ ಮಹಾಮೇಳದಲ್ಲಿ ಎಲ್ಲಾ ಚಟುವಟಿಕೆಗಳಲ್ಲೂ 'ಎ' ಗ್ರೇಡ್ ಪಡೆದದ್ದು, ಈ ಮಹಾಮೇಳದಲ್ಲಿ ಕರ್ನಾಟಕದ 625 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಭಾಗವಹಿಸಿದ್ದರು.

1998-99ನೇ ಸಾಲಿನಲ್ಲಿ ಕರ್ನಾಟಕದ 401 ಸ್ಕೌಟ್ಸ್‌ಗಳು, 3 ರೋವರ್ಸ್, 381 ಗೈಡ್ಸ್‌ಗಳು ರಾಷ್ಟ್ರಪತಿ ಪದಕ ಪಡೆದದ್ದು, ಹೆಮ್ಮೆಯ ವಿಷಯ.

ಬೆಂಗಳೂರಿನ ಮಹಾರಾಣಿ ಕಾಲೇಜಿನ ಹಿಂಭಾಗದ ಶಾಂತಿ ಗೃಹ,ದೊಡ್ಡಬಳ್ಳಾಪುರದ ಬೆಸೆಂಟ್ ಪಾರ್ಕ್ ಹಾಗೂ ದಾವಣಗೆರೆ ಜಿಲ್ಲೆಯ ಹರಿಹರ ತಾಲ್ಲೂಕಿನ ಸಮೀಪದ ಕೊಂಡಜ್ಜಿ ಗ್ರಾಮದಲ್ಲಿ ಇರುವ ಕೊಂಡಜ್ಜಿ ಬಸಪ್ಪ ಸ್ಕೌಟ್ಸ್ ಮತ್ತು ಗೈಡ್ಸ್ ತಾಣಗಳು ಸುಂದರ ಪ್ರಕೃತಿ, ಪರಿಸರದ ಮಧ್ಯೆ ಕಾರ್ಯನಿರ್ವಹಿಸುತ್ತಾ ಇವೆ. ಸ್ಕೌಟ್ಸ್ ಮತ್ತು ಗೈಡ್ಸ್ ಇನ್ನೂ ಹಲವಾರು ಕ್ಷೇತ್ರಗಳಲ್ಲಿ ತನ್ನ ಸಹಾಯ ಹಸ್ತವನ್ನು ಚಾಚಿದೆ. ಒರಿಸ್ಸಾ ಚಂಡ ಮಾರುತದ ಹಾವಳಿಯಿಂದ ತತ್ತರಿಸಿದಾಗ ಅಲ್ಲಿನ ದುರಸ್ಥಿಗೊಂಡ ಸ್ಥಳಗಳ ಪರಿಹಾರ ಕಾರ್ಯದಲ್ಲಿ ನಮ್ಮ ರಾಜ್ಯದ 50ಕ್ಕೂ ಹೆಚ್ಚು ಸ್ಕೌಟ್ಸ್ ವಿದ್ಯಾರ್ಥಿಗಳು ತೆರಳಿ ಸೇವೆ ಸಲ್ಲಿಸಿದರು. ದೇಶಭಕ್ತಿ ,ಜನರ ಬಗ್ಗೆ ಸ್ಕೌಟ್ಸ್ -ಗೈಡ್ಸ್‌ಗಳಿಗೆ ಇರುವ

ಅರಿವಿಂಗೆ ಹಿರಿದು-ಕಿರಿದುಂಟೆ - ವಚನ.

ಕಳಕಳಿ ಅತ್ಯಂತ ಶ್ಲಾಘನೀಯವಾದದ್ದು.

ಸ್ಕೌಟ್ಸ್ ಮತ್ತು ಗೈಡ್ಸ್‌ನಿಂದಾಗುವ ಪ್ರಯೋಜನಗಳು ಹಲವಾರು, ಅವು ಈ ಕೆಳಗಿನಂತಿವೆ.

ಸ್ಕೌಟ್ ಸಂಸ್ಥೆಯು

1) ಒಬ್ಬ ಜವಾಬ್ದಾರಿ ನಾಗರೀಕನನ್ನು ರೂಪಿಸುತ್ತದೆ.

2) ಆದರ್ಶ ನಾಗರೀಕನನ್ನಾಗಿ ಪ್ರೇರೇಪಿಸುತ್ತದೆ.

3) ಮಾನವೀಯ ಮೌಲ್ಯಗಳನ್ನು ಹೆಚ್ಚಿಸುತ್ತದೆ.

4) ಭಾರತೀಯ ಸಂಸ್ಕೃತಿಯ ವಿಸ್ತರಣೆಗೆ ಪ್ರೇರಣೆ ನೀಡುತ್ತದೆ.

5) ಉನ್ನತ ಸಮಾಜದ ಸುಧಾರಣೆಗೆ ಒತ್ತು ಕೊಡುತ್ತದೆ.

6) ಸ್ವದೇಶಿ ಭಾವನೆಯನ್ನು ಜಾಗೃತಗೊಳಿಸುತ್ತದೆ.

7) ಶಿಸ್ತುಬದ್ಧ ಜೀವನವನ್ನು ನಡೆಸಲು ಸಹಾಯಕವಾಗುತ್ತದೆ.

8) ಶಾಂತಿ ಮತ್ತು ಸಾಮರಸ್ಯವನ್ನು ಮೈಗೂಡಿಸಿಕೊಳ್ಳುವುದು.

9) ಶಾರೀರಿಕ ಮತ್ತು ಬೌದ್ಧಿಕ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವುದು.

10) ಪರಸ್ಪರ ಹೊಂದಿಕೊಂಡು ಹೋಗುವ ಜೀವನ,

ಇತ್ಯಾದಿ......

ರಾಜ್ಯದ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರಧಾನ ಆಯುಕ್ತ ''ಕೊಂಡಜ್ಜಿ ಬಿ. ಷಣ್ಮುಖಪ್ಪ'' ಅವರ ಪ್ರಕಾರ ಶಿಕ್ಷಕರಲ್ಲಿ ಅರ್ಪಣಾ ಮನೋಭಾವ ಇದ್ದರೆ ರಾಜ್ಯದಲ್ಲಿ ಈ ಆಂದೋಲನವನ್ನು ಇನ್ನಷ್ಟು ಯಶಸ್ವಿಗೊಳಿಸಬಹುದು. ಆದರೆ ಶಿಕ್ಷಕರಿಗೆ ಶಾಲೆಗಳಲ್ಲಿ ಅಲ್ಲದೆ, ಸರಕಾರದ ಅನೇಕ ಕೆಲಸಗಳನ್ನು ಮಾಡಬೇಕಾದ ಅನಿವಾರ್ಯತೆ ಇರುವುದರಿಂದ ಈ ಆಂದೋಲನದಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಳ್ಳಲು ಸಾಧ್ಯ ಆಗುತ್ತಿಲ್ಲ. ನಗರ ಮತ್ತು ಪಟ್ಟಣ ಪ್ರದೇಶಗಳಲ್ಲಿ ಆಂದೋಲನ ಹೆಚ್ಚು ಪ್ರಚಾರದಲ್ಲಿದೆ. ಹೀಗೆ ಸ್ಕೌಟ್ಸ್ ಮತ್ತು ಗೈಡ್ಸ್ ಎಲ್ಲಾ ರಂಗದಲ್ಲಿ ತನ್ನದೇ ಆದ ಛಾಪು ಮೂಡಿಸಿದೆ. ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಜೀವನ ಶಿಸ್ತು ಬದ್ಧವಾಗಿ, ಕ್ರಮವಾಗಿದೆ.

ಇದೀಗ ನಮ್ಮ ದಾವಣಗೆರೆ ಜಿಲ್ಲೆಯಲ್ಲಿ ಹೊಸ ವರ್ಷದಲ್ಲಿ (2-1-2006) ನಡೆಯಲಿರುವ ಸ್ಕೌಟ್ಸ್ ಮತ್ತು ಗೈಡ್ಸ್‌ನ ರಜತ ಮಹೋತ್ಸವ ನಡೆಯುತ್ತಿರುವುದು ನಮಗೆಲ್ಲಾ ಹೆಮ್ಮೆಯ ಸಂಗತಿ.



# ಸ್ಕೌಟ್ಸ್ ಮತ್ತು ಗೈಡ್ಸ್‌ನ ಮಹತ್ವ

ಶ್ರೀಮತಿ ಕೆ.ಕೆ.ಲೀಲಾ
ತರಬೇತಿ ಆಯುಕ್ತರು,
ರಾಜ್ಯ ಸಂಸ್ಥೆ ಬೆಂಗಳೂರು.

ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಲ್ಲಿ ದೈಹಿಕ, ಬೌದ್ಧಿಕ ಮತ್ತು ಆಧ್ಯಾತ್ಮಿಕ ಬೆಳವಣಿಗೆಯನ್ನು ಪ್ರೋತ್ಸಾಹಿಸುವುದರಿಂದ ಅವರು ಸಮಾಜದಲ್ಲಿ ರಚನಾತ್ಮಕ ಸ್ಥಾನವನ್ನು ಪಡೆಯುವ ಗುರಿಯನ್ನು ಈ ಶಿಕ್ಷಣ ಹೊಂದಿದೆ. ಆಕರ್ಷಕ, ಆನಂದದಾಯಕ ಸ್ಕೌಟ್ಸ್ ಮತ್ತು ಗೈಡ್ಸ್ ಪ್ರತಿಜ್ಞೆ ಹಾಗೂ ನಿಯಮಗಳ ಆಧಾರದ ಮೇಲೆ ನಾಯಕತ್ವದ ಮಾರ್ಗದರ್ಶನದ ಪ್ರಗತಿಪರ ತರಬೇತಿಯ ಚಟುವಟಿಕೆಗಳನ್ನು ರೂಪಿಸುವ ಮಾರ್ಗದಿಂದ ಈ ಶಿಕ್ಷಣ ಗುರಿಯನ್ನು ತಲುಪಬಹುದು. ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಬೆಳವಣಿಗೆ ಮುಂದುವರಿಯಬೇಕಾದರೆ ಸ್ಕೌಟಿಂಗ್ ಅತ್ಯಾವಶ್ಯಕ. ತನ್ನ ವ್ಯಕ್ತಿತ್ವ ತನಗೆ ಅರಿವಾಗಬೇಕಾದರೆ ಇತರ ಸ್ಕೌಟ್ಸ್, ಗೈಡ್ಸ್ ಮಕ್ಕಳೊಂದಿಗೆ ಸಂಪರ್ಕ ಬೆಳೆಸುವುದು ಮುಖ್ಯ. ಬೇಡನ್ ಪೊವೆಲ್ಲರುವರು ಹೇಳಿರುವಂತೆ ಸ್ಕೌಟಿಂಗ್ ಎಂಬುದು ''ಹೊರಾಂಗಣ ಆಟ'' . ಆದ್ದರಿಂದ ಅವಕಾಶ ದೊರೆತಾಗ , ಹೊರಾಂಗಣ ಪ್ರವೇಶಿಸಿದಾಗ ಉತ್ತಮ ವ್ಯಕ್ತಿತ್ವ ಹೊರಹೊಮ್ಮಲಿದೆ ಹಾಗೂ ನಾವು ಶಿಬಿರವಾಸಿಗಳಾಗಬಹುದು. ಹೊರಸಂಚಾರ ಹೋಗಬಹುದು ಮತ್ತು ಪ್ರಕೃತಿಯ ಆನಂದವನ್ನು ಅನುಭವಿಸಬಹುದು. ಹಾಗೂ ಸ್ನೇಹ ಸರಪಳಿಗೆ ಬುನಾದಿಯಾಗಬಹುದು.

ಸ್ಕೌಟ್ಸ್ ಚಳುವಳಿಯ ಸಂಘಟನೆ ಮತ್ತು ಬೆಳವಣಿಗೆಯ ಕೀರ್ತಿ ಎಲ್ಲರಿಗೂ ಸಲ್ಲುವಂತಹುದು. ನಮ್ಮಲ್ಲಿ ಇಡೀ ಚಳವಳಿಯ ಬಗ್ಗೆ ತಮ್ಮ ದೃಷ್ಟಿ ಮತ್ತು ನಿಷ್ಠೆ ಎರಡರಲ್ಲೂ ವಿಶಾಲ ಮನಸ್ಸನ್ನು ಹೊಂದಿರುವ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳು ಮುಂದಿನ ಉತ್ತಮ ಪ್ರಜೆಗಳಾಗುವರು.

ಸ್ಕೌಟಿಂಗ್‌ನಲ್ಲಿ ಎಲ್ಲಾ ಮಕ್ಕಳಿಗೂ ಪ್ರತಿಯೊಂದು ಚಟುವಟಿಕೆಯಲ್ಲೂ ಭಾಗವಹಿಸುವ ಅವಕಾಶವಿದೆ. ಕಾಲ್ನಡಿಗೆಯಲ್ಲಿ ಮತ್ತು ಸೈಕಲ್‌ನಲ್ಲಿ ಹೊರಸಂಚಾರಕ್ಕೆ ಹೋಗುವುದರಿಂದ, ಪ್ರಕೃತಿ ಅಧ್ಯಯನ ಮಾಡುವುದರಿಂದ ಹಾಗು ಹಲವಾರು ಸಾಹಸ ಚಟುವಟಿಕೆಗಳಲ್ಲಿ ಭಾಗವಹಿಸುವುದರಿಂದ ಧೈರ್ಯ, ಸ್ವಾಭಿಮಾನ, ಆತ್ಮಸ್ಥೈರ್ಯ, ಸೌಹಾರ್ದತೆ, ಸಹಬಾಳ್ವೆ , ಸಹಕಾರ ಮನೋಭಾವನೆ ಬೆಳೆದು ಸ್ವಾವಲಂಬಿಯಾಗಿ ಬಾಳುತ್ತಾರೆ ಹಾಗೂ ಪ್ರಗತಿಪರ ಶಿಕ್ಷಣದಲ್ಲಿರುವ ಪ್ರಾವೀಣ್ಯತಾ ಪದಕಗಳಲ್ಲಿ ಹಲವಾರು ಪದಕಗಳನ್ನು ಪಡೆಯಲು ಸದವಕಾಶವಿದೆ.

ಹೀಗೆ ಪ್ರಾವೀಣ್ಯತೆಯನ್ನು ಪಡೆದಂತಹ ನಮ್ಮ ಯುವಕ ಯುವತಿಯರು ಇಂದು ಜೀವನೋಪಾಯಕ್ಕಾಗಿ ಸ್ವ-ಉದ್ಯೋಗಿಗಳಾಗಿದ್ದಾರೆ. ಸ್ಕೌಟ್ಸ್ ಮತ್ತು ಗೈಡ್ಸ್ ಆದವರು ಹಲವಾರು ಕೌಶಲ್ಯಗಳನ್ನು ಕಲಿಯುವುದರಿಂದ ಸ್ಕೌಟಿಂಗ್ ಒಂದು ಜೀವನ ಶಿಕ್ಷಣವಾಗಿದೆ.

> ನನ್ನ ದೇಹದ ಬೂದಿ , ಗಾಳಿಯಲಿ ತೂರಿಬಿಡಿ
> ಹೋಗಿ ಬೀಳಲಿ ಭತ್ತ ಬೆಳೆಯುವಲ್ಲಿ
> ಬೂದಿ ಗೊಬ್ಬರದಿಂದ ತೆನೆಯೊಂದು ನೆಗೆದುಬರೆ
> ಧನ್ಯವಾಯಿತು ಹುಟ್ಟು ಸಾವಿನಲ್ಲಿ
> – ದಿನಕರ ದೇಸಾಯಿ

ನೋವನ್ನು ಸಂಭ್ರಮಿಸುವ ಗುಣವೇ ಸಂಸ್ಕೃತಿ – ಜಿಡ್ಡು ಕೃಷ್ಣಮೂರ್ತಿ.



# ಸ್ಕೌಟಿಂಗ್ ಬಾಲಕ-ಬಾಲಕಿಯರನ್ನು ಅರ್ಹ ನಾಗರೀಕರನ್ನಾಗಿ ಮಾಡುತ್ತದೆ

ಶ್ರೀಮತಿ ಸಿ. ಮಂಜುಳ
ರಾಜ್ಯ ಸಹಾಯಕ ಸಂಘಟನಾ ಆಯುಕ್ತರು
ದಾವಣಗೆರೆ.

ಮಕ್ಕಳು ಉತ್ತಮ ನಾಗರೀಕರಾಗುವಲ್ಲಿ ಸ್ಕೌಟ್ ಮತ್ತು ಗೈಡ್ಸ್ ಸಂಸ್ಥೆಯ ಪಾತ್ರ ಮಹತ್ವವಾದದ್ದು. ಕಾರಣ ಸಮಾಜದ ಸತ್ಪ್ರಜೆಗಳಾಗುವ ಮಕ್ಕಳ ಸರ್ವಾಂಗೀಣ ಅಭಿವೃದ್ಧಿಯ ಅಂಶಗಳಾದ ನೈತಿಕ, ಸಾಮಾಜಿಕ, ಧಾರ್ಮಿಕ, ಆಧ್ಯಾತ್ಮಿಕ ಮುಂತಾದ ಅನೇಕ ವಿಷಯಗಳ ಭದ್ರ ಬುನಾದಿಯೊಂದಿಗೆ ತರಬೇತಿ ನೀಡಲಾಗುತ್ತದೆ.

ಐದು ವರ್ಷದಿಂದ 25 ವರ್ಷದ ಹುಡುಗ ಹಾಗೂ ಹುಡುಗಿಯರು ಅಂದರೆ ಕಬ್ಸ್ ,ಬುಲ್ ಬುಲ್, ಸ್ಕೌಟ್ಸ್ ,ಗೈಡ್ಸ್ ,ರೋವರ್ಸ್ ,ರೇಂಜರ್ಸ್ ದೇಶದ ಯುವಕ-ಯುವತಿಯರು ಇವರಿಗೆ ಅನೇಕ ಹಂತಗಳಲ್ಲಿ ಉತ್ತಮ ಮಾರ್ಗದರ್ಶನ ಪಡೆದು ಸಮುದಾಯದ ಇತರೇ ಮಕ್ಕಳನ್ನು ಸನ್ಮಾರ್ಗದಲ್ಲಿ ನಡೆಯುವ ಉತ್ತಮ ಚಾರಿತ್ರ್ಯ ಮಕ್ಕಳನ್ನು ಸೃಷ್ಠಿಸುವಲ್ಲಿ ಸ್ಕೌಟಿಂಗ್ ಮತ್ತು ಗೈಡ್ಸ್‌ನ ಪಾತ್ರ ಮಹತ್ವವಾದುದು.

ಶಿಬಿರಗಳಲ್ಲಿ ಬೆಳಿಗ್ಗೆ 5-30ಕ್ಕೆ ಏಳುವ ಮಗು ದೈಹಿಕವಾಗಿ ವ್ಯಾಯಾಮ ಮಾಡಿ ಸದೃಢನಾಗುತ್ತಾನೆ. ನಂತರ ತನ್ನ ಗುಡಾರವನ್ನು ಸ್ವಚ್ಛವಾಗಿಟ್ಟು ಕೊಂಡು ಸ್ಪರ್ಧಾತ್ಮಕತೆಯ ಮೂಲಕ ನೈರ್ಮಲ್ಯ ಶಿಸ್ತು ಮುಂತಾದ ವಿಷಯಗಳನ್ನು ಕಲಿತ ಮಗು, ದೇವರಲ್ಲಿ ಪ್ರಾರ್ಥನೆ ಸಲ್ಲಿಸಿ ದೇಶ ಭಕ್ತಿಯನ್ನು ಧ್ವಜಾ ರೋಹಣದೊಂದಿಗೆ ರೂಡಿ ಮಾಡಿಕೊಳ್ಳುತ್ತಾನೆ. ಸರ್ವಧರ್ಮ ಸಮನ್ವಯ, ಸಹಭೋಜನ, ಪರಸ್ಪರ ಹೊಂದಾಣಿಕೆ, ಸಮಾನತೆ, ಭಿನ್ನತೆ ಇಲ್ಲದಿರುವಿಕೆಯನ್ನು ಮಕ್ಕಳು ಜೀವನದಲ್ಲಿ ಅಳವಡಿಕೊಳ್ಳುತ್ತಾರೆ. ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ಅಂದಾಜು ಅಳೆಯುವುದು ಎತ್ತರವನ್ನು ಕಂಡು ಹಿಡಿಯುವುದು, ತೂಕದ ಅಳತೆ, ಆಳ - ಅಗಲ ಮುಂತಾದವುಗಳನ್ನು ಸಾಧನಗಳಿಲ್ಲದೆ, ದಂಡ ಕಾಲ, ಕಣ್ಣಳತೆ ಇವುಗಳ ಮೂಲಕ ಜೀವನಕ್ಕೆ ಅವಶ್ಯಕವಾದ ಅಂದಾಜು ಎಂಬ ವಿಷಯವನ್ನು ಮಗು ಮಾಡಿ ಕಲಿ ಎಂಬ ನಾಣ್ಣುಡಿ ಕೆಳಗೆ ಕಲಿಯುತ್ತದೆ.

ಹಾಗೆಯೇ ದಿಕ್ಸೂಚಿ (ದಿಕ್ಕುಗಳ ಪರಿಚಯ) ಮ್ಯಾಪಿಂಗ್, ಮಾರ್ಗಶೋಧನೆ, ಪ್ರಥಮ ಚಿಕಿತ್ಸೆ ಬ್ಯಾಂಡೇಜ್ ಕಟ್ಟುವುದು, ರೋಗಿಯನ್ನು ಸಾಗಿಸುವುದು, ದಂಡಗಳಿಂದ ಒಂದಕ್ಕೊಂದು ಬಂಧಿಸಿ ಟವರ್ ಮಂಕಿ ಬ್ರಿಡ್ಜ ಟೆಂಟ್, ಕಾಲುವೆ ದಾಟುವ ಮಾರ್ಗ, ಯಾವುದೇ ಸ್ಟ್ಯಾಂಡ್ ಇಲ್ಲದೇ ರೂಪಿಸುವ ಮಲ್ಟಿ ಪರ್ಪಸ್ ಗ್ಯಾಡ್ಜಟ್, ಹಾಗೆಯೇ ಕರಕುಶಲತೆ ಆಟಗಳ ಮೂಲಕ ಪಾಠ ಮುಂತಾದವುಗಳನ್ನು ಲರ್ನಿಂಗ್ ಬೈ ಡುಯಿಂಗ್‌ಗೆ ಉದಾಹರಣೆಗಳು. ರಾತ್ರಿ ಶಿಬಿರಗಳಲ್ಲಿ ಪ್ರತಿಯೊಂದು ಮಗು ತನ್ನಲ್ಲಿರುವ ಪ್ರತಿಭೆಗಳನ್ನು ಹೊರ ಹೊಮ್ಮಿಸಲು ಅನೇಕ ಚಟುವಟಿಕೆಗಳನ್ನು ಮಕ್ಕಳು ಪ್ರದರ್ಶನ ನೀಡುತ್ತಾರೆ. ಇದರಿಂದ ಮಕ್ಕಳಲ್ಲಿ ಅಡಕವಾಗಿರುವ ಪ್ರತಿಭೆಗಳನ್ನು ನೃತ್ಯ, ನಾಟಕ, ರೂಪಕ, ಏಕಪಾತ್ರಾಭಿನಯ, ಸಾಮಾಜಿಕ ಪಿಡುಗುಗಳನ್ನು ನಾಟಕ ರೂಪದಲ್ಲಿ ತೋರಿಸಿ ಜನರಲ್ಲಿ ಜಾಗೃತಿ ಉಂಟು ಮಾಡುವುದು ಮುಂತಾದ ಕಲೆಗಳನ್ನು ಹೊರಹೊಮ್ಮುವ ವೇದಿಕೆ. ನಮ್ಮ ಶಿಬಿರಾಗ್ನಿ ಒಂದು ಉತ್ತಮ ಪ್ರೋತ್ಸಾಹಕವಾಗಿವೆ. ನಮ್ಮಲ್ಲಿರುವ ಕಲಿಸುವ ವಿಧಾನವು ಮಾತ್ರ ಬೇಸ್ ಮೆಥೆಡ್‌ನಲ್ಲಿ, ಗುಂಪು ಕಲಿಕೆಯಲ್ಲಿ ಚರ್ಚೆಯ ಮೂಲಕ ಸ್ಪರ್ಧಾತ್ಮಕ ಆಟಗಳ ಮೂಲಕ ಕಲಿಸುವುದು ಹೀಗೆ ಅನೇಕ ವಿಧಾನಗಳನ್ನು 'ಮಾಡಿ ಕಲಿ' ಎಂಬ ವಿಷಯವನ್ನು ಮಕ್ಕಳಿಗೆ ಮನದಟ್ಟು ಮಾಡುತ್ತದೆ.

ನಮ್ಮ ಚಟುವಟಿಕೆಗಳಲ್ಲಿ ಬೆರೆತ ಮಗುವಿಗೆ ನಯ, ವಿನಯ, ಶಿಸ್ತು ಸಾರ್ವಜನಿಕ ಪ್ರಜ್ಞೆ, ಸ್ನೇಹ ಸಹೋದರತೆ, ಪ್ರಾಣಿಗಳಲ್ಲಿ ದಯೆ, ಮಿತವ್ಯಯ, ಧರ್ಮ ಮುಂತಾದ ಅನೇಕ ವಿಷಯಗಳನ್ನು ಜೀವನದಲ್ಲಿ ರೂಢಿಸಿಕೊಳ್ಳುವ ಮಕ್ಕಳು 'ದೇಶ ನೋಡು ಕೋಶ ಓದು' ಎಂಬ ನುಡಿಯಂತೆ ಶಿಬಿರಗಳಲ್ಲಿ ಭಾಗವಹಿಸಿ ಜಿಲ್ಲಾ, ರಾಜ್ಯ, ರಾಷ್ಟ್ರ, ಅಂತರಾಷ್ಟ್ರೀಯ ಮಟ್ಟದವರೆಗೆ ಮಕ್ಕಳು ಭಾಗವಹಿಸುತ್ತವೆ.

ಅತೀ ಅವಶ್ಯವಾದದ್ದು 'ಸಮಾಜ' ಈ ಸಮುದಾಯದ ಅಭಿವೃದ್ಧಿಯನ್ನು ನಮ್ಮಲ್ಲಿ ಕೆಲವು ಪ್ರಾವಿಣ್ಯತೆ ಪದಕಗಳನ್ನು ಪಡೆಯಲು ಕೆಲವು ಸೋಪಾನಗಳನ್ನು ಮುಗಿಸಲು ಯೋಜನೆಗಳನ್ನು ಸಿದ್ದಪಡಿಸಬೇಕು. ಉದಾಹಾರಣೆಗೆ ವಯಸ್ಕರ ಶಿಕ್ಷಣ, ಸ್ವಚ್ಛತೆ, ಪ್ಲಾಸ್ಟಿಕ್ ಅವೇರ್‌ನೆಸ್ ಗಿಡ ನೆಡುವುದು, ಕುಷ್ಠ ರೋಗ ನಿಯಂತ್ರಣ, ರಸ್ತೆ ನಿಯಮ ಪಾಲನೆ, ಸಾರ್ವಜನಿಕ ಸ್ಥಳಗಳ ರಕ್ಷಣೆ ಮುಂತಾದ ಅನೇಕ ಯೋಜನೆಗಳನ್ನು ಕಡ್ಡಾಯವಾಗಿ ಮಾಡಲೇಬೇಕಾಗಿರುವುದರಿಂದ ಅವನು / ಅವಳು ಪರೋಕ್ಷವಾಗಿ ಸಮುದಾಯದ ಅಭಿವೃದ್ಧಿಯ ಪಾಲುದಾರನಾಗುತ್ತಾನೆ. ಇಷ್ಟೆಲ್ಲಾ ಕಲಿಯುವ ಮಗು ನಿಸ್ಸಂದೇಹವಾಗಿ ದೇಶದ ಉತ್ತಮ ಪ್ರಜೆ ಆಗುವುದರಲ್ಲಿ ಸಂದೇಹವೇ ಇಲ್ಲ. ಇದೆಲ್ಲದರ ಜೊತೆಗೆ ಮಗುವಿನ ಏಳಿಗೆ ಅಂದರೆ ಬೆಳವಣಿಗೆಗೆ ಗೊತ್ತಾಗದರೀತಿ ಸ್ಕೌಟ್ ಗೈಡ್ಸ್ ಅನೇಕ ಅವಾರ್ಡ್ ಪಡೆಯುತ್ತಾರೆ. ಮೊದಲಿಗೆ ತೃತೀಯ ಸೋಪಾನ ಮುಗಿಸಿದ ಮಗು ಜಿಲ್ಲಾಧಿಕಾರಿಗಳಿಂದ ಅವಾರ್ಡ್ ಪಡೆಯುತ್ತಾನೆ. ನಂತರ ರಾಜ್ಯ ಪಾಲರಿಂದ ರಾಜ್ಯ ಪುರಸ್ಕಾರ ಪಡೆದು ಪಾಲಿಟೆಕ್ನಿಕ್, ಟಿಸಿಹೆಚ್, ಐಟಿಐಗಳಲ್ಲಿ ಓದಲು ಸೀಟುಗಳನ್ನು ಕಾಯ್ದಿರಿಸುವಿಕೆಯ ಸೌಲಭ್ಯವನ್ನು ನಮ್ಮ ಸ್ಕೌಟ್ ಗೈಡ್‌ಗಳು ಪಡೆದಿದ್ದಾರೆ. ಹಾಗೆಯೇ ಮುಂದಿನ ಹಂತ ರಾಷ್ಟ್ರಪತಿ ಅವಾರ್ಡ್. ರಾಷ್ಟ್ರದ ಪ್ರಥಮ ಪ್ರಜೆಯಿಂದ ಪಡೆದು ಇಂಜನಿಯರಿಂಗ್, ಡಾಕ್ಟರ್ ಪದವಿ ಹಾಗೂ ಡೆಂಟಲ್ ಪದವಿ ಹಾಗೂ ಕೆಲವು ಉದ್ಯೋಗದಲ್ಲಿ ಕಾಯ್ದಿರಿಸುವ ಸೌಲಭ್ಯವನ್ನು ಸ್ಕೌಟ್ ಗೈಡ್‌ಗಳಿಗೆ ದೊರಕುತ್ತವೆ. ಕೇವಲ ಶಾಲೆಗೆ ಹೋಗುವ ಮಕ್ಕಳಿಗೆ ಸಿಗದೇ ಇರುವ ಸದವಕಾಶ ರಾಜಭವನಕ್ಕೆ ಹೋಗಿ ರಾಜ್ಯಪಾಲರಿಂದ ಪ್ರಶಸ್ತಿ, ರಾಷ್ಟ್ರಪತಿ ಭವನಕ್ಕೆ ಹೋಗಿ ರಾಷ್ಟ್ರಪತಿ ಪ್ರಶಸ್ತಿ ಗಳನ್ನು ನಮ್ಮ ಸ್ಕೌಟ್ ಗೈಡ್‌ಗಳಿಗೆ ಸಂಸ್ಥೆ ಅವಕಾಶ ಕಲ್ಪಿಸಿರುವುದು ನಮ್ಮ ಸುದೈವ.

ಸ್ಕೌಟ್ ಸಂಸ್ಥೆಗೆ ಸೇರುವ ಮಗು ಪ್ರತ್ಯೇಕವಾಗಿ ಹಾಗೂ ಪರೋಕ್ಷವಾಗಿ ನಮ್ಮ ಮಗು ಉತ್ತಮ ದೇಶಾಭಿಮಾನಿಯಾಗಿ ದೇಶಕ್ಕೆ ಕೀರ್ತಿ ತರುವ ಅತ್ಯುತ್ತಮ ನಾಗರಿಕರನ್ನಾಗಿ ಸೃಷ್ಠಿಸುತ್ತಿರುವ ಕೀರ್ತಿ ಭಾರತ್ ಸ್ಕೌಟ್ ಗೈಡ್ ಸಂಸ್ಥೆಗೆ ಸಲ್ಲುತ್ತದೆ. ●

ನಾನು ಹೀನ, ನಾನು ಹೀನನೆನ್ನುತ್ತಾ, ಮನುಷ್ಯನು ಹೀನನಾಗಿ ಹೋಗುತ್ತಾನೆ - ವಿವೇಕಾನಂದ.

# ಪೋಷಕರಿಗೆ ಸಂದೇಶ



ನಿಮ್ಮ ಹುಡುಗ/ಹುಡುಗಿ ಸ್ಕೌಟ್/ಗೈಡ್ ಆಗಬೇಕು. ಏಕೆಂದರೆ,

1. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಯ ಬಿಡುವಿನ ಸಮಯವನ್ನು ಹಿತಕರ ಸಹಪಾಠಿಗಳೊಂದಿಗೆ ಆರೋಗ್ಯಕರ ಚಟುವಟಿಕೆಗಳನ್ನು ತೊಡಗಿಸುವಂತೆ ಮಾಡುತ್ತದೆ.

2. ಸ್ಕೌಟಿಂಗ್/ಗೈಡಿಂಗ್ - ಯಾವುದೇ ಉದ್ಯೋಗದಲ್ಲಿ ಹುಡುಗ/ಹುಡುಗಿಯ ಯಶಸ್ಸಿಗೆ ಅಗತ್ಯವಾದ ನೈತಿಕ ಬಲವನ್ನು ನೀಡುತ್ತದೆ.

3. ಸ್ಕೌಟಿಂಗ್/ಗೈಡಿಂಗ್ - ಒಂದು ಸೈನಿಕ ಚಳವಳಿಯಲ್ಲ. ನಾವು ಒಳ್ಳೆಯ ನಾಗರಿಕ ವ್ಯಕ್ತಿಗಳನ್ನು ರೂಪಿಸ ಹೊರಟಿದ್ದೇವೆಯೇ ವಿನಃ ಅನುಕರಣೆ ಸಿಪಾಯಿಗಳ ಒಂದು ತಂಡವನ್ನಲ್ಲ.

4. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಗೆ ಸೇವಾವಕಾಶಗಳನ್ನು ಕಲ್ಪಿಸಿಕೊಡುತ್ತದೆ. ದೇವರು ಮತ್ತು ನೆರೆಯವರಲ್ಲಿ ಗೌರವ ಭಾವನೆ ಇರುವುದು ಧರ್ಮದ ಮೂಲ ಎಂದು ತಿಳಿಸುತ್ತದೆ.

5. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಯನ್ನು ಕುಶಲರನ್ನಾಗಿ ಮಾಡುತ್ತದೆ. ಅವರ ಹವ್ಯಾಸಗಳು ಮನೆಗೆ ಉಪಯುಕ್ತವಾಗುವಂತೆಯೇ ಅವರಿಗೂ ಆಸಕ್ತಿಯ ವಿಷಯಗಳಾಗುತ್ತವೆ.

6. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಯಲ್ಲಿ ಒಂದು ಗೌರವ ಮತ್ತು ನಿಷ್ಠೆಯ ಭಾವನೆಯನ್ನು ಬೆಳೆಸುತ್ತದೆ. ಅವರು ನಿಮ್ಮನ್ನು ನಿರಾಸೆಗೊಳಿಸುವುದಿಲ್ಲ, ಅಥವಾ ನಿಮಗೆ ಸುಳ್ಳು ಹೇಳುವುದಿಲ್ಲ.

7. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಗೆ ಸ್ವಾವಲಂಬನೆಯನ್ನು ಕಲಿಸುತ್ತದೆ. ಇದರಿಂದ ಅವರು ತಮಗೆ ತಾವೇ ರಕ್ಷಣೆ ಪಡೆದು ಇತರರಿಗೂ ನೆರವಾಗಬಲ್ಲರು.

8. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಗೆ ಆರೋಗ್ಯ ತಂದು ಕೊಡುತ್ತದೆ. ಬಯಲ ವ್ಯಾಯಾಮ ಮತ್ತು ಆತ್ಮ ರಕ್ಷಣೆ ಮೂಲಕ ಅವರು ಸದೃಢ ದೇಹ ಮತ್ತು ಸದೃಢ ಮನಸ್ಸು ಗಳಿಸುತ್ತಾರೆ.

9. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಯ ಸಹಜ ಪ್ರತಿಭೆಯನ್ನು ಗುರುತಿಸುತ್ತದೆ. ಮತ್ತು ಆ ಮೂಲಕ ಅವರು ಉದ್ಯೋಗದ ಆಯ್ಕೆಯಲ್ಲಿ ಸೂಕ್ತವಾದುದನ್ನು ಆರಿಸಿಕೊಳ್ಳಲು ನೆರವಾಗುತ್ತದೆ.

10. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಗೆ ಸಂತೋಷ ನೀಡುತ್ತದೆ. ಹರ್ಷೋತ್ಸಾಹಗಳ ಸಹವಾಸ ಮತ್ತು ನಿಸರ್ಗದ ಸುಖಾನುಭವದ ಮೂಲಕ ಅವರು ಖುಷಿಯಾಗಿರುತ್ತಾರೆ.

11. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಯ ದೃಷ್ಟಿಕೋನವನ್ನು ವಿಶಾಲಗೊಳಿಸುತ್ತದೆ. ಹೇಗೆಂದರೆ ಪ್ರತಿಯೊಂದು ನಾಗರಿಕ ದೇಶದಲ್ಲಿ ಇರುವ ಅದರ ಶಾಖೆಗಳು ಪರಸ್ಪರ ಸಂಬಂಧವಿಟ್ಟುಕೊಂಡಿವೆ.

12. ಸ್ಕೌಟಿಂಗ್/ಗೈಡಿಂಗ್ - ನಿಮ್ಮ ಹುಡುಗ/ಹುಡುಗಿಯನ್ನು ಯೋಗ್ಯ ವ್ಯಕ್ತಿಯನ್ನಾಗಿ ರೂಪಿಸುತ್ತದೆ. ಅವರು ನೀವು ಅಪೇಕ್ಷಿಸಿದಂತಹ ವ್ಯಕ್ತಿಗಳಾಗುತ್ತಾರೆ.

Baden-Powell of Gilwell

- ಬೇಡನ್ ಪೊವೆಲ್



# SCOUT/GUIDE - A WORTHY CITIZEN

**Mohamed Wasil,** M.A. B.E.D. L.T.(S).

Scout/Guide movements prepare the boys and girls to become the worthy citizens of the country the founder Lord Baden Powell, in his book 'scouting for Boys' says that scouting is citizenship training.

A boy aged ten plus joining scout troop acquaints with the preliminaries of scouting, prepares himself for the 'INVESTITURE' as a scout.

The scout master arranges for the 'INVESTITURE CEREMONY'. The parents and the office bearers of the troop are invited for the ceremony. In the "TROOP MEETING" in the presence of all the scouts of the troop the scout master knowing the intention of the recruit scout to become the member of the 'scout movement', asks the boy to repeat the scout promise. The boy repeats the scout promise. The scout master pins the 'Membership Badge' and the troop neck scarf is given to him. Thus the boy becomes a member of the world organization of scout movement. In the ceremony all importance is given to the boy. He is made to commit himself to the promise and law. He has promised to live according to the promise and law.

The Promise States

"On my honor, I promise that will do my best'

To do my duty to God and my country

To help other people and

To obey the 'Scout Law'

<u>The scout law says :-</u>

A scout is Trust worthy

A scout is loyal

A scout is friend to all and a brother to every other scout

A scout is courteous

A scout is a friend to animals and loves nature

A scout is disciplined and helps protect public property

A scout is courageous

A scout is thrifty

A scout is pure in word, thought and deed.

The values imbibed in promise and law lead the boy to do the right actions only. He has committed to it and will follow.

Now the boy joins his 'PATROL OF EIGHT SCOUTS' which is part of a 'TROOP' of thirty two scouts. In the patrol the other boys who are senior to him who have learnt already some skills, train him. He learns every thing by 'learning by doing method'.

He is given training in every aspect of leading life like first aid, cooking \ map reading, estimation, camp craft, find the way at the out of doors. Cooking etc and he is exposed to proficiency badges which lure him to learn the things which are required to lead a happy life, through scout programme. He earns to his satisfaction the zillapuraskar, the Rajyapuraskar and the Rashtrapati puraskar, awards.

- Never swap horses crossing a stream.

The scout master takes the boy to the camping life. Here he is exposed to the nature. Here he learns the ways and means to live in nature adjusting to the environment. Not only this, he has to adjust to the temperaments, attitudes, habits of his companions (members of his patrol). Here he realizes the greatness of God and adjusts to the vagaries of nature. Learns good habits self help, cooking for self and others. His fear of loneliness and the darkness, disappears. Camp is the place where the child is mould in character, habits, learns new things, thinks ahead, protecting himself, loving his fellowmen, practises obedience to his elders and praising almighty God.

He is given opportunities to attend the 'RALLY' at local level, 'CAMPOREE'at district level, 'JAMBORETE'at state level and JAMBOREE at National and International levels. These gatherings make him to meet people of different cultures, different traditions, different religions, different languages, different habits.

He is given opportunities to attend camps at state level and national level, there by he travels and get the knowledge of the people, Geography, customs, different cultures of the country as well as the people of other countries.

These gatherings create in him an awareness, which makes him to become an enlightened man. Now he is the citizen of the world. He is so busy in his scout activities that he has no time to think about evil things.

Now, he is the man looking ahead for making his life useful, not only to his country, but to the world at large. He thinks good of the humanity. He has realized that he has to leave this world better than what he had found earlier.

He is an asset to the country as well as the world.

He takes initiative to learn to act and to serve during his oldage also. He has kept up the promise of the 'Investiture'.

Like the boy the girl also becomes a world citizen through the guide activities.

In conclusion a 'Boy Scout'/a 'Girl Guide' will be the worthy citizens of the country as well as the world. ●

***PEACE IN MY INNER HEART***

***PEACE IN THE COMMUNITY***

***PEACE IN THE HUMANITY***

***SMILE EVERY WHERE***

***Oh...SMILE TO THE NATION***

***SMILE TO THE WHOLE WORLD***

***PEACE IS FOR YOU & ME***

*(Tune : We shall over come)*

THIS LITTLE PEACE MESSAGE OF MINE
I'LL SPREAD IT ALL AROUND
ALL AROUND, ALL AROUND
LET IT SPREAD ALL AROUND
TAKE THE PEACE ROUND THE WORLD
I'LL SPREAD IT ALL AROUND
ALL AROUND, ALL AROUND,
LET IT SPREAD ALL THE TIME

(Tune : This little guiding)

**S.K. PRABHA,** L.T.(G)
BANGALORE.

◆ A wise son make the a glad father.



# MANAGEMENT & LEADERSHIP

**M.A.Chelliah**
Headquarters Commissioner
(information & Public Relations)
Bharat Scouts & Guides,Karnataka.

Management has existed ever since man has been organised in to communities. It is some times thought to be an invention of the 20th Century but this is not so. Wherever and whenever people worked together in groups to grow crops, to buy and sell, to wage war, to build a spiritual centre-there was management.

**"Management is getting things done through people".**

This definition should not be read to mean only that someone (Administrator/Secretary) commands and others (working people) execute, although this happens in practice. Rather it should be interpreted to mean that working people is the most important means, or resource, for getting things done.

"Management is to make efficient use of resources and to get people to work harmoniously together in order to achieve objectives. People may be cooks, Teachers, Engineers, Nurses, Doctors, Administrators, Secretaries and others but at some time during their work they are also managers.

However important manpower is, it is not the only resource that will need to be managed to achieve stated objectives, and the reader will have no difficulty in naming the other resources.

A convenient trick for remembering types of resources is 3 Ms-Manpower, Materials, Money. Manpower has already been named. Another type is Materials, i.e., equipment and supplies used or consumed in achieving objectives and the third resource is Money, without which the first two can not function.

There is another useful definition of management :

**Management is the Efficient use of Resources**

The general component of management is labour i.e., work must be shared by or divided among number of different categories-Skilled group, Technical Group and Service Group for the Developmental activities and Service activities.

Management is a goal oriented and dynamic in function

Management is an art as well as a Science.

**Management is a Group activity :** Management is necessarily and important part of the Group activities. As no individual can satisfy all his desires himself, he associates himself with his fellow workers (individuals) and work in an organised group to achieve what he cannot achieve individually. This means Management is a "Co-operative Group". Management consists of getting things done through others.

**Management needs Co-ordination :** Co-ordination is defined as the orderly synchronisation of efforts of the People working in the organisation for the achievement of

organisational objectives. Effective Leadership is the best technique of co-ordinations. It is the duty of the Heads of the Organisation to co-ordinate the activities of individuals working under him through good leadership technique and Public Relations.

**Decision Making :** Decision making involves certain Commitment. Management Committed to every decision; it aims at the achievement of Organisational objectives. Decision-making is a dynamic activity and not a Static entity.

**Motivation :** Motivation is general term applying to the entire class of drives, desires, needs, wishes and similar forces that induce an individual of group of work.

**Negative Motivation :** Bossism, punishment and rigid discipline are the negative and fearful motivation which is based on force and fear. Such motivation will result in fear, demotion, work lay off, inefficiency and checks the work speed.

**Morale :** Morale is defined as "the degree of enthusiasm and willingness with which individual workers of a group set out to perform the assigned work with Zeal and Sincerity, resulting in good team work".

**Management needs good leadership :**

Democratic Leadership : Democratic or Participatory Leadership is a Leadership style where the Leaders involve followers to Plan and implement the decided task. The democratic leader accepts the positive suggestions of the followers for the betterment and development of the organisation.

To establish good Relationship, better Communication and to work with people cordially the administrators/Secretaries may follow the followings :

Listen and understand - Discuss and Decide

Encourage to implement, Participate
and appreciate.

*"Happiness is not based on POSSESSION- POWER - PRESTIGE*
*but on building healthy rapport with People (Public-Every one)*
*Whom You Love and Work with"*

- It is a man Making Theories that We want
  It is a man Making Education all round that We want.
- Don't hate but Love, Don't break in anger but unite in Peace

- Swami Vivekananda

## SOME IMPORTANT FACTS

- Anger is one letter short of danger
- Improvement always begins with I
- The only sure thing about luck is that is will change
- Success is more attitude than aptitude
- To teach is to learn twice
- Some people are so tense they soon become past tense
- Life is understood backwards, but must be live forward.
- Success is timely a relative term - more the success more the relatives.

Alive, November 2003, p. 74.

- Beware of little expenses; a small leak will sink a great ship.



# BOY SCOUTS-GIRL SCOUTS THEIR WORK

**S.Paul Raj,**
H.Q.Commissioner for Projects.
Kolar Gold Fields.

Every boy and Girl wants to help his/her country in some way or the other.

There is a way by which he/she can do it easily, and that is by becoming a 'SCOUT'.

But besides war Scouts, there are also peace scouts i.e. men in peace time carryout work which requires the same kind of abilities. These are the frontier men of all parts of the world. The trappers of North America, Hunters of Central Africa, the Shikaris of the Indian Jungles, pioneer, explorers and missionaries over Asia and all the wild parts of the world, the bushmen and drovers of Australia, the constabulary of north west Canada and of South Africa- all are peace scouts, real men in very sense of the word and thoroughly upto 'Scout Craft' i.e., they understand living out in the jungles, and they can find their way any where, or able to read meaning from the smallest signs and foot tracks, they know how to look after their health when far away from any doctor, are strong and plucky, and ready to face any danger, and always keen to help each other. They are accustomed to take their lives, in their hands, and to fling them down without any hesitation if they can help their country by doing so.

They give up every thing, their personal comforts and desires in order to get their work done. They do not do all this for their own amusement, but because it is their duty to their country, fellowcountrymen, or employers.

The history of our country is made by our Indian Kings, Warriors, and later by freedom fighters during the British time and 'Great Scout' Mahatama Gandhi, the father of the nation for hundreds of years past up to the present time.

The Kshatriya of India, like the Knight of king Arthur in Britain, set themselves in a high standard of Chivalary to live upto. The missionaries of the emperor Ashoka faced the unknown dangers of strange lands in carrying out the duty entrusted to them, and the Rajput heroes faced the known dangers of powerful enemies in making their kingdoms secure for their subjects.

Baker and Livingstone pushed their way through the savage deserts and forests of Africa, Davis, Franklin and Ross braved the ice and snows of the Artic regions, and more lately Scott and Shakeleton gave their lives in Scouting in the Antartic.

These are just a few names out of many hundreds of the Scouts of the common wealth who have from all times down to the present spread its good name and power in all parts of the world.

In India, Panna, to save the life of infant Rana Udai Sinha, disguised her own son in his clothes to be murdered in his instead. Meanwhile she smuggled Rana away in a basket and flied with him through the wild country, enduring intense suffering and hardships out of loyalty to him as her chief, until she had gained a safe asylum for him.

- Children should be seen and not heard.

And there have been women scouts too. Sita and Draupadi, who accompanied their husbands into the forest during their exile are others, and I expect you have heard too of Grace Darling, who risked her life to save a ship wrecked crew, Florence Nightingale, who nursed six soldiers in crime and war, Miss Kingsley, the African explorer, Lady Lugard, in Africa and Alaska, Rani Kittoor Chennamma who fought for our country's Liberation, Mother Teresa in recent times who served for the sick, suffering and starving Indian population, Smt. Indira Gandhi who rendered yeoman service for the backward people of our country, strived for good will, peace and understanding of the world communities and many devoted lady missionaries and nurses in all parts of the world.

These have shown that GIRLS as well as BOYS may well learn SCOUTING while they are young, and so able to do useful works in the world as they grow older.

(Source : " **SCOUTING FOR BOYS**")

## A TO Z OF PARENTING

Accept your child for what he is, not what you want him to be
Be consistent in your behaviour towards the child
Criticise the deed, never the doer, that is the child
Do activities together as a family
Encourage sibling harmony by not cocparing them
Follow through if you make threats
Gifts can never be a substitute for your presence
Hitting teaches your child to hit others
Instil values in the child by being a role model
Joy of eating together at least one meal helps in bonding
Keep increasing freedom as your child becomes responsible
Love your child completely and unconditionally
Motivate your child with praise instead of criticism
Negotiating with your child is not a sign of weakness
Offer suggestions but let your child make the decision
Participate in events which are important for your child
Quit labelling children as "naughty boy" of clumsy girl"
Restrict television, videos and computer games
Spend time with your child without diversions
Teach your child that choices have consequences
Use bedtime to discuss what happened during the day
Visualise what qualities you want in your child as an adult
Work out a routine and follow it through
Xcite the child's interest in books by providing material
Your child needs limits to make him/her feel secure
Zestful fun of the child's short comings lowers his self-esteem ●

◆ It is more blessed to give than to receive.



# THE MAGIC OF A THANK YOU

**Mrs. Geetha Nataraj,** LT(G)
ASC(G) Bangalore Division
BS & G, KARNATAKA.

A handwritten, personal note can have enormous impact. Even a brief comment can show how much we care and can make a vital difference in the lives of Scouts and Guides. In fact a simple thank-you note can be a powerful tool for smooth relationship and career success. Expression of appreciation not only brings joy to the receiver, but provides several benefits to the giver.

All of us like to receive thank you notes. The thoughtfulness that lies behind such a gesture expresses more than just gratitude, it also uplifts the mood of the receiver. A written thank you proves to a person that his or her efforts are valued and recognized, which reinforces the desired behavior.

A thank you not expresses appreciation and respect, both of which are powerful ways to strengthen the bond between Scouts and Guides. Upon receiving a thank-you proves to a person that his or her efforts are valued and recognized, which reinforces the desired behavior.

A thank-you note expresses appreciation and respect, both of which are powerful ways to strengthen the bond between Scouts and Guides. Upon receiving a thank you note, the individual feels valued and the relationship is enhanced. Just think how you would feel to receive written recognition for the good thing that you did.

**A SOURCE OF ENCOURAGEMENT**

Write a sincere and encouraging thank-you note. Include key points to help personalise the note. This will make the recipient feel special and will encourage him or her. Handweritten thank-you notes are extremely powerful. We get more feedback if we respond to individuals with a personal handwritten note than if we write a generic note, normally Xeroxed or copied.

When you consider who to send your notes to, remember all the people who have helped you along the way. Extend your gratitude to all of them, whether the person's gift or help to you was large or small. Most people do things with no intention of recognition, but when their actions are recognised by a simple thank you, that is reward enough.

**WHAT A THANK-YOU NOTE CAN DO FOR YOU**

The benefits resulting from your thoughtful gesture far exceed the efforts required to write the note. Also, write a thank-you note after meeting someone new. Writing it promptly after being introduced to someone will not only help you to remember that person in a distinctive way, but will reinforce a lasting impression of you. By formally expressing your appreciation, you will realise the full potential of your networking opportunities. In addition to helping you achieve greatness, expressions of gratitude remind us of all our blessings.

**HOW TO WRITE A THANK-YOU NOTE :**

You can write a thank-you note for just about any occasion. The following the tips will help you

convey a warm, comforting and sincere message.

a. Start your opening sentences with "you" or "your". It will grab the recipient's attention right away.

b. Name the specific gift, favour or thoughtful act. (by the time your letter arrives, most people would have forgotten what they did or gave)

c.Keep it short. This will help you focus on the main point.

d. End by writing Out: thank you or a statement of appreciation.

e. Personalise our note by handwriting it.

f. Send the note promptly. If you forget to send it right away, the old adage "better late than never" applies.

No matter what language you speak, the expression of gratitude is universal. A smiple thank you translates into any culture and is openly accepted. The most common form of expressing gratitude is through spoken words. But why don't you take it a step further and put it in writing?

## TENSION

The moment your are in Tension
You will lose Attention
Then you are in Total Confusion
And you will feel Irritation
Then you will spoil personal Relation
Ultimately, you would not get Co-operation
Then you will make things Complication
Then your BP may also rise caution
And you may have to take Medication
Instead, understand the Situation
So try to think about the Solution
Many problems will be Solved
Don't think it's our free Suggestion
It is only for your Prevention
You'll never come again to TENSION!

◆ Brevity is the soul of wit.



# VISIT TO PAXTU-BADEN-POWELL'S HOME AT NYERI,KENYA

**Prof. A.S.Chandrashekar**
District Commissioner(Scouts)
Shimoga

Making their way to the Outspan Hotel in Nyeri visitors are faced by this signboard, fixed to a pepper-tree at a turn of th edrive. The Outspan has a lot of visitors : those who use it as their base before going on the the world-famous "Treetops", and those who go there especially in order to see"paxtu" itself, the last home of Baden-Powell, founder of the Boy Scout and Girl Guide Movements.

B-P first visited East Africa-each of the present countires of Kenya, Uganda and Tanzania-in 1906, and he recorded his impressions both in words and pictures in his book Sketches in Mafeking and East Africa, published in 1907.

He did not go there again until late in 1935 when he carried out inspections of Scouts at rallies organised throughoutthe country. He then visited his old friend, Major E.Sherbrooke Walker, M.C., whohad been B-P's first private secreatery after the founding of the Boy Scout Movement. Erie Walker had built the Outspan Hotel in Nyeri and the still more famous Treetops.

B-P once again fell in love with the "wonderful views over the plains to the bold snow peak of Mount Kenya", and so when ordered by his doctor to rest in the winter of 1937 it was to Nyeri that he came. "The nearer to Nyeri, the nearer to bliss", he said, "I am coming to spend the rest of my life at the Outspan".

He asked his friends to build him a cottage in Outspan hotel premises before he came back for what he said was to be the third and last time. He preferred a little house with a sitting-room, large veranda, two bedrooms, two bathrooms, two fireplaces, garden, a fountain and bird-bath in front of the veranda.

"We have utilised part of the Silver Wedding gift from Scouts and Guides', wrote B-P in The Scouter for May, 1938, in building for a cottage at Nyeri. We have named it "Paxtu", since it will be a second "Pax" to us, and a permanent reminder of the generous goodwill of the Movement.' In October, 1938, he went to Nyeri to live in Paxtu. He died on 8th January 1941 and was buried at Nyeri in the compound of St.Peter's Church. Lady B-P died in England on 25th June 1977 and her ashes were flown to Kenya and interred into her husband grave at Nyeri on 9th August 1977.

For the last twenty years, until Miss Corbett's death in 1963, the house has been lived in by B-P's old friend Jim Corbett, author of Man-eaters of Kumaon and his sister Maggie.

In 1964 Kenya Scouts and Guides subsribed for a seat which has been placed in the garden in front of the house, and which bears the inscription.

**"This seat was given by Kenya Scouts and Guides in memory of Lord Baden-**

◆ *Your body is the temple of the Holy Ghost.*

**Powell of Gilwell, their Founder, who lived here from October 1938 until his death on 8th January, 1941."**

At the same time the signpost on the entrance drive and the carved cedar plaque (illustrated on this page) on the house itself were given by the Kenya Boy Scouts Association to keep the Founder's memory green, and to direct the countless visitors who come from every part of the globe to visit the Founder's last home and his grave in the near-by cemetery. The government of Kenya has declared the grave of the Late Lord and Lady Baden Powell and PAXTU, the house where Baden-Powell spent his last days in Nyeri as **National Monuments.**

I was fortunate to visit B-P grave and offered prayers. Further when I entered B-P's home PAXTU, I was moved by his simple living and high thinking and got a lesson from his last Message- Real happiness is helping others. ●

## MONEY

Money Can Buy A Bed Not Sleep.

Money Can Buy A Book But Not Brains.

Money Can Buy Food But Not Appetite.

Money Can Buy Medicine But Not Health.

Money Can Buy House But Not Home.

Money Can Buy Luxuries But Not Culture.

Money Can Buy Amusement But Not Happiness.

Money Can Buy Cosmetics But Not Beauty.

Money Can Buy Servants But Not Equality.

Money Can Buy Lust But Not Love.

Money Can Buy People But Not Acceptance.

Money Can Buy Goods But Not Peace.

Money Can Buy Status But Not Nobility.

Money Can Buy Recognition But Not Dignity.

Money Can Buy Position But Not Greatness.

Money Can Buy Service But Not Loyalty.

Money Can Buy Power But Not Authority.

Money Can Buy Man But Not God. ●

◆ Blessing never come in pairs; misfortunes never come alone.

